# ಹೊಸ ಹೆಜ್ಜೆ

( ಸಾಮಾಜಿಕ ಕಾದಂಬರಿ )



ಅನುವಾದಕ :

" ಭಾರ್ಗವ "

ಸಮಾಜ ಪುಸ್ತಕಾಲಯ, ಧಾರವಾಡ.

# ಮಹತ್ವದ ತಿದ್ದುಪಡಿ

**ಪುಟ ೫ ಸಾಲು ೧೬** ವ್ರಜೇಶನ ತಂದೆ ತೀರಿದುದರಿಂದ ಎಂದು ಓದಬೇಕು.
**ಪುಟ ೮** ಆದೊಡನೆ ಈ ಕೆಳಗಿನ ವಿಷಯ ಓದಿ ೯ನೇ ಪುಟ ಆರಂಭಿಸಬೇಕು.

ಆ ಹಸ್ತಪ್ರತಿಗಳನ್ನು ನೋಡಿ ಆತನಿಗೆ ಆಶ್ಚರ್ಯವಾಯಿತು. ಅದರಲ್ಲಿ ಪ್ರತಿಪಾದಿಸಿದ ವಿಷಯ ಅತ್ಯುತ್ತಮ ಲೇಖಕರನ್ನೂ ಮೀರಿಸುವಂತಿತ್ತು.

"ಅವರು ಗುಪ್ತನಾಮಗಳನ್ನಿಟ್ಟು ಬರೆಯುತ್ತಿದ್ದರು. ಕೀರ್ತಿಯ ಆಸೆ ಅವರಿಗಿದ್ದಿಲ್ಲ. ಅದಕ್ಕಾಗಿಯೇ ಎಲ್ಲಿಯೂ ಅವರ ಹೆಸರು ಕೇಳಬರುವದಿಲ್ಲ. ಇಷ್ಟು, ಮೊದಲೇ ನಮ್ಮನ್ನು ಅಗಲಿ ಹೋದಾರೆಂದು ನಾನೆಂದೂ ಕಲ್ಪಿಸಿರಲಿಲ್ಲ" ಎಂದಳು ಆಕೆಯ ತಾಯಿ. ಅಂದಿನಿಂದ ವ್ರಜೇಶ ಅವರ ಮನೆಯವನೇ ಆಗಿಬಿಟ್ಟ, ಹೀಗೆಯೇ ನಾಲ್ಕು ವರ್ಷ ಗತಿಸಿತು.

ಈ ದಿನಗಳಲ್ಲೆಲ್ಲ ದಿನಾಲು ಒಂದು ತಾಸು ತಡಿತಬಾಲಾ ಹಾಗೂ ಅವಳ ತಂಗಿ ತಮ್ಮಂದಿರಿಗೆ ಓದಿಸುತ್ತಿದ್ದ. ಇದರಿಂದ ಬಾಲೆಯು ಖಾಸಗಿಯಾಗಿ ಅಭ್ಯಾಸಮಾಡಿ ಎಂಟ್ರೆನ್ಸ ಪಾಸಾಗಿ ಎಫ್. ಎಸ್. ಸಿ. ವರ್ಗವನ್ನು ಸೇರಿದಳು. ಅಲ್ಲಿ ಎರಡು ವರ್ಷ ಕಲಿತು ಮೆಡಿಕಲ್ ಕಾಲೇಜಿನಲ್ಲಿ ಹೆಸರು ಹಚ್ಚಿದಳು. ಈ ಅವಧಿಯಲ್ಲಿ ಲೇಖನ ಕಲೆಯಲ್ಲಿಯೂ ಆಕೆ ಪ್ರಗತಿ ಪಡೆದಿದ್ದಳು. ಆಕೆಯೊಂದು ಕಾದಂಬರಿ ಬರೆಯಲು ತೊಡಗಿದ್ದಳು. ವ್ರಜೇಶನು ಅಲ್ಲಲ್ಲಿ ತಿದ್ದುತ್ತಿದ್ದ. ಆದರೆ ಅವನಿಗೆ ತಿಂಗಳಿಗೆ ಎರಡುನೂರು ಸಂಬಳದ ಮೇಲೆ ಝಾನ್ಸಿಯಲ್ಲಿ ನೌಕರಿ ಸಿಕ್ಕಿತು.

ವ್ರಜೇಶ ತೆರಳಿದಂದಿನಿಂದ ಆಕೆಗೆ ಎಲ್ಲೆಡೆಯಲ್ಲಿಯೂ ಕತ್ತಲೆಯಾದಂತೆ ಕಾಣಹತ್ತಿತು. ಇತ್ತ ಝಾನ್ಸಿಯಲ್ಲಿ ವ್ರಜೇಶ ತನ್ನ ತಂದೆಯ ಮಿತ್ರನೊಬ್ಬನ ಮಗಳಾದ ಕಲೆಯ ಕಲಾ ಪ್ರಶಂಸೆ ನಡೆಸಿದ್ದ.

ವ್ರಜೇಶನ ಜೊತೆಗೆ ಎಷ್ಟೋ ಮಂದಿ ಹೆಂಗಸರಿದ್ದರು

"ಮನೆಯಲ್ಲಿದ್ದವಳು ಆತನ ತಾಯಿಮಾತ್ರ. ಇವರೆಲ್ಲ ಎಲ್ಲಿಯವರು?" ಕಲೆಯ ತಾಯಿ ನುಡಿದಳು, "ಇಂತಹ ವೇಳೆಯಲ್ಲಿ ನೆರೆಹೊರೆಯವರೂ ಮನೆಯವರೇ ಆಗುತ್ತಾರೆ" ಎಂದಳು ಉಮೆ.

ತನ್ನ ಗುರುತು ಹತ್ತಬಾರದೆಂದು ವ್ರಜೇಶನ ತಾಯಿ ಜೊತೆಗೆ ಹೆಂಗಸರನ್ನು ಕರೆದುಕೊಂಡು ಬಂದಿದ್ದಳು. ಆದರೆ ತೀಕ್ಷ್ಣಬುದ್ಧಿಯ ಉಮೆಯ ಮುಂದೆ ಆಟ ನಡೆಯಲಿಲ್ಲ. ಗುಟ್ಟು ರಟ್ಟಾಯಿತು. ಹೆಣ್ಣು ನೋಡಲು ಬಂದದ್ದೆಂದು ಒಪ್ಪಿಕೊಳ್ಳಬೇಕಾಯಿತು.

"ಮಗಳೇ, ಕೆಮೆರಾದ ಸಹಾಯವಿಲ್ಲದೆ ನನ್ನ ಚಿತ್ರ ತೆಗೆಯಬಲ್ಲೆಯಾ?"

# ಹೊಸ ಹಜ್ಜೆ



ಅನುವಾದಕ: — **ಭಾರ್ಗವ.**

ಕಲೆಗೆ ಕಲಾಭಿರುಚಿಯೇ ಒಂದು ಶತ್ರುವಾಗಿತ್ತು. ಚಿತ್ರ, ಸಂಗೀತ, ಕವಿತಾ ಇವುಗಳಲ್ಲಿ ಯಾವುದೇ ಒಂದರ ಅಮಲೇರಿದರೂ ಸಾಕು; ಅವನ ಮನದ ಸಾಮಂಜಸ್ಯ ನಷ್ಟವಾದಂತೆ. ಕಲೆಗೆ ಮೂರರದೂ ವ್ಯಸನವಿದೆಯೆಂದ ಬಳಿಕ ಕೇಳಬೇಕೆ? ಆದರೆ ಈ ಮಾತನ್ನು ಆಕೆ ಒಪ್ಪುತ್ತಿರಲಿಲ್ಲ. ಸತ್ಯಕ್ಕೆ ಸೌಂದರ್ಯವನ್ನುಂಟುಮಾಡಿ, ಕಲ್ಯಾಣವನ್ನುಂಟು ಮಾಡುವ ವಿಧಾನವೇ ಕಲೆಯೆಂದು ಆಕೆಯ ಮತ. ಅದರ ಬಗ್ಗೆ ಉದಾಹರಣೆಯಾಗಿ ಒಂದೆರಡು ಸಂಸ್ಕೃತ ಶ್ಲೋಕ ಹಾಡಿ ಬಿಡುತ್ತಿದ್ದಳು. ಅರ್ಥ ತಿಳಿಯದಿದ್ದರೂ ಜನ ಅವಳ ಕಂಠ ಮಾಧುರ್ಯಕ್ಕೆ ತಲೆದೂಗುತ್ತಿದ್ದರು.

ಅವಳ ಜೀವನದಲ್ಲಿ ಬಿರುಗಾಳಿಯಂತೆ ವ್ರಜೇಶ ಪ್ರವೇಶಿಸಿದ. ಆತನೊಬ್ಬ ಕಲಾವಿದನೆಂದು, ತನ್ನ ಕಲಾಪೂರ್ಣವಾದ ಹೃದಯ ಸಿಂಹಾಸನದಲ್ಲಿ ಕುಳ್ಳಿರಿಸಲು ಬಯಸಿದ್ದಳು. ಆಗಲೆ ಆತನ ಒಲವು ನೋಡಿ ಆ ಬಿರುಗಾಳಿಗೆ ತನ್ನ ಹೃದಯವೆಲ್ಲ ಚೂರು ಚೂರಾಗಿ ಹೋಗುತ್ತದೋ ಎಂಬ ಅಂಜಿಕೆಯೂ ಈಗ ಸುಳಿಯುತ್ತಿದೆ.

ವ್ರಜೇಶ ಒಂದು ತಿಂಗಳೊಳಗಾಗಿ ಮೂರು ಬಾರಿ ಬಂದ. ಒಂದು ದಿನ ಕಲೆಯು ತನ್ನ ಗೆಳತಿ ಉಮೆಯ ಮನೆಗೆ ಹೋಗಿದ್ದಳು. ತನ್ನ ಸ್ಥಿತಿಗತಿ ತೋಡಿಕೊಂಡಳು. ಉಮೆಯು ಫಲಾಹಾರವನ್ನಿತ್ತು “ಕಲಾ, ನಿನ್ನ ಭಯ ನಿರರ್ಥಕವಾದುದು. ಅದು ಪ್ರೇಮದ ವಿಕಾರವೆಂದು ಮಾನಸಶಾಸ್ತ್ರವೆನ್ನುತ್ತಿದೆ. ನಿಜವಾದ ಪ್ರೇಮ ಉತ್ಪನ್ನವಾದ ಮೇಲೆ ಈ ವಿಚಾರವು ತನ್ನಿಂದ ತಾನೇ ನಷ್ಟವಾಗುತ್ತದೆ ಸೂರ್ಯನ ಮುಂದೆಂದಾದರೂ ಮೋಡ ನಿಂತೀತೇ?

“ಮೋಡ ಸೂರ್ಯನನ್ನು ಮುಚ್ಚುತ್ತಿದೆ. ನಮ್ಮ ಹತ್ತಿರವೇ ಮೋಡವಿರುತ್ತದೆ. ಆದರೆ ಸೂರ್ಯನಿರುವುದು ಅದೆಷ್ಟೋ ದೂರ. ನಮ್ಮಲ್ಲಿಗೆ

ಬಂದು ನೋಡು, ನನ್ನ ಜೀವನ ನೌಕೆ ಪಾರುಗಂಡೀತೋ ಇಲ್ಲವೋ ಎಂದು ಹೇಳಬಹುದು."

"ನಾನು ಇಂದೇ ಬರುವೆ. ಮೋಡಗಳೆದ ಮೇಲೆ ಬಿಸಿಲು ಬರಲೇ ಬೇಕೆಂಬುದು ಪ್ರಕೃತಿ ನಿಯಮ. ಇದರ ಅನುಭವ ನನಗಿದೆ"

"ಅದು ನಿನ್ನ ಸೌಭಾಗ್ಯದ ಫಲ. ನೀನು ಮಾಡಿದಂತಹ ತಪಸ್ಸನ್ನು ನಾನು ಮಾಡಲಾರೆ. ನೀನು ಉಮೆಯಲ್ಲವೇ? ಆಕೆಯಂತೆಯೇ ತಪಸ್ವಿನಿ ನೀನು. ನಾನಾದರೋ ಕಲೆ"

"ಕಲೆಯೆಂದು ಹೆಸರಿಟ್ಟುಕೊಂಡ ಮಾತ್ರಕ್ಕೆ ಯಾರಾದರೂ ಕೋಮ ಲೆಯರಾಗುವರೇ?"

"ಅಹುದು. ಇಲ್ಲವಾದರೆ ಕಲೆಯೆಂದು ಹೇಗೆ ಕರೆಯುವಿರಿ? ಎಲ್ಲ ಬೆರಳೂ ಸರಿ ಇರುತ್ತವೆಯೇ? ನಿನ್ನಂತೆ ನಾನೊಂದು ದಿನವೂ ಈ ಕಷ್ಟ ಸಹಿಸಲಾರೆ."

"ಗಂಡ ಸಿಟ್ಟಾದರೆ ಆತನ ಮನಸ್ಸನ್ನು ಒಲಿಸಲಾರೆಯಾ?"

"ಇಲ್ಲ, ಕಲಿಯ ನಿಜವಾದ ರೂಪವನ್ನು ಅರಿಯದಿರುವಿಕೆಯೇ ಸಿಟ್ಟಾ ಗುವುದರ ಕಾರಣ. ಅಂತಹರು ತಾವಾಗಿಯೇ ದೂರವಾಗಬೇಕು. ವಿನಂತಿ ಮಾಡಿಕೊಂಡಷ್ಟು ದೂರ ಸರಿಯುತ್ತಾರೆ. ಪತಿಯು ಗೃಹಪತಿಯೇ ಹೊರತು ಪತ್ನಿಯ ಮೇಲೆ ಆತನ ಅಧಿಕಾರವಿಲ್ಲ."

"ಹೌದು, ಹೌದು, ಪೂಜೆ ಮಾಡಲೆಂದೇ ಗಂಡಸು ಹೆಂಗಸನ್ನು ತಂದಿ ರುತ್ತಾನೆ. ಅಲ್ಲವೇ?" ಮನುವೂ ಹೇಳಿರುವ—

"ನನಗೇನೂ ಆ ಆಧಾರಗಳಲ್ಲಿ ವಿಶ್ವಾಸವಿಲ್ಲ. ನಾನಾಡುತ್ತಿರುವುದು ಈ ಕಾಲದ ಸುದ್ದಿ" "ಕಲಿಯುಗದ್ದೇ!"

"ಕಲಿಯುಗದ ಕಲುಷತೆ ಕಳೆದು ಕರ್ಮಯುಗ ಬಂದಿದೆ. ಕಲಿಯು ಗದ ಹೆಸರಿನಿಂದ ಯಾರ ಒತ್ತಾಯವೂ ನಡೆಯದು."

"ಇದೆಲ್ಲ ವ್ರಜೇಶನ ಉಪದೇಶವೆಂದು ಕಾಣುತ್ತಿದೆ. ನಿನ್ನ ಮಾತು ಕೇಳಿ ಆತನೇ ಇದನ್ನೆಲ್ಲ ಹೇಳಿಕೊಟ್ಟನೇ?"

"ಕಲೆಯಮೇಲೆ ಯಾರ ಅಧಿಕಾರವೂ ನಡೆಯದು. ಹಾಗೆ ಒಬ್ಬರ ಪ್ರಭಾವಕ್ಕೆ ಒಳಗಾಗುವವಳು ಅವಳಲ್ಲ."

"ಬದಲಾಗುವುದು ನೀತಿ, ಧರ್ಮ ಮಾತ್ರ. ಇರಲಿ ನಾನು ಎಂಟು ಹೊಡೆಯುವುದರೊಳಗಾಗಿ ಬಂದು ಮುಟ್ಟುವೆ. ಅವರೀಗ ಕಚೇರಿಯಿಂದ ಬರುವ ಹೊತ್ತಾಗಿದೆ. ಬೇಗನೇ ಅಡಿಗೆಮಾಡುವೆ"

"ಈಗ ಫಲಾಹಾರಕ್ಕೆ ಮಾಡಿದ ತಿಂಡಿಯೇ ಬಹಳವಿದೆ. ಇನ್ನೇಕೆ ಅಡಿಗೆಯ ಸಂಭ್ರಮ? "

"ಅವರಿಗೆ ಅನ್ನ ಪಲ್ಯದ ಆವಶ್ಯಕತೆ ಇದೆ"

"ಮಾಡದಿದ್ದರೇನೇ?"

"ನಿನಗೇನು? ಒಬ್ಬಳೇ ಬೋರ್ಡಿಂಗಿನಲ್ಲಿ ಉಂಡು ಕಾಲೇಜು ಕಲಿತವಳು. ಈಗಂತೂ ಮನೆಗೆ ಬಂದಿರುವೆ. ಅಲ್ಲದೆ ಹೊಸಬರೊಬ್ಬರ ಪರಿಚಯವನ್ನೂ ಮಾಡಿಕೊಂಡಿರುವೆ. ಅವರ ಜೊತೆಗೆ ಕೆಲದಿನ ಕಳೆದೆಯೆಂದರೆ ಈ ಪ್ರಶ್ನೆ ಎತ್ತಲಾರೆ"

"ಹೀಗೆಲ್ಲ ಅಡಿಗೆಮಾಡುತ್ತ ಕೂಡ್ರುವುದು ಹೀನಾಯವಲ್ಲವೇ? "

"ಹೀನತ್ವವೆಲ್ಲಿಯದು ? ಇದೇ ಕರ್ತವ್ಯ. ಇದರಲ್ಲಿಯೇ ಶ್ರೇಷ್ಠತೆಇದೆ. ಮನುಷ್ಯನೊಬ್ಬ ಸಾಮಾಜಿಕಪ್ರಾಣಿ. ಸಮಾಜಕ್ಕೆ ಹೊಂದಿ ನಡೆಯಲಾರದವನೆಂತಹ ಮನುಷ್ಯ? ನೀನೇ ಹೇಳು ನೋಡುವಾ"

"ರೊಟ್ಟಿಮಾಡುವುದೇ ಮನುಷ್ಯತ್ವ! ಅಲ್ಲವೇ? "

"ಹಸಿದವನಿಗೆ ಅನ್ನ, ನೀರಡಿಸಿದವನಿಗೆ ನೀರು, ರೋಗಿಗೆ ಔಷಧ, ಹಿರಿಯರಲ್ಲಿ ಶ್ರದ್ಧೆ, ಸಹೋದರರಲ್ಲಿ ಸ್ನೇಹ, ಪತಿಯಲ್ಲಿ ಪ್ರೇಮ ಇವು ಆವಶ್ಯಕವಲ್ಲವೇನೇ?"

"ಇರಲಿ, ಆದೆಲ್ಲ. ನನಗೀಗ ಪ್ರೀತಿಯಿಂದ ಫಲಹಾರವಿತ್ತಿರುವೆ. ಇನ್ನು ಪತಿದೇವನಿಗಾಗಿ ಅಡಿಗೆ ತಯಾರಿಸು, ಆದರೆ ಎಂಟು-ಘಂಟೆಯೊಳಗಾಗಿ ಬರದಿರಬೇಡ, ನೋಡು"

"ನಾನು ಅವಶ್ಯವಾಗಿ ಬರುವೆ. ಈ ಆನಂದವೇ ಮಾನವ ಜೀವನದ ಸಾರಸರ್ವಸ್ವ. ಇಂತಹ ಮಂಗಲಮಯ ದಾರಿಯಲ್ಲಿ ಸಾಗಲು ಹಿಂದೆಮುಂದೆ ನೋಡಬೇಡ, ಕಲಾ. ಪ್ರಜೇಶನನ್ನು ತಪ್ಪಾಗಿಣಿಸಬೇಡ; ಅಂಜಬೇಡ,"

"ಕಲೆಯನ್ನು ಕಂಡೇ ತನ್ಮಯನಾಗಬೇಕಾದುದು ಅವನ ಕರ್ತವ್ಯ. ಅವನ ಗದರಿಕೆಗೆ ಮಣಿಯುವವಳು ಕಲೆಯಲ್ಲ;"

" ಹಾಗೆ ಮಾಡಿದರೆ ಅದರಲ್ಲಿ ಸತ್ವವಿರದು, ಕಲಾ "

ಅಷ್ಟರಲ್ಲಿ ಉಮೆಯ ಗಂಡ ಗಿರೀಶ ಪ್ರವೇಶಿಸಿದ. "ಏನು ಜೀವನ! ಏನು ಸತ್ವ! ಎಂತಹ ಮಾತು ? ಬಂದಿರುವೆಯಾ ಕಲಾ ? ಹಾದಿತಪ್ಪಿ ದೆಯಾ ? "

" ತಪ್ಪುವುದೆಂತು ಮಾನವ ಸ್ವಭಾವ. ನೀವಂತೂ ಹಾದಿತಪ್ಪಿ ಯಾದರೂ ನಮ್ಮತ್ತ ಸುಳಿಯುವದಿಲ್ಲ. ಅಕ್ಕನಿಗೂ ಅತ್ತ ಬರಗೊಡುವದಿಲ್ಲ"

" ನಿಮ್ಮ ಅಕ್ಕ ಹಾಗೆ ಹೇಳಿದರೇ? ನಮ್ಮಲ್ಲಿ ಕಚೇರಿ ಕೆಲಸ ಹೆಚ್ಚಾ ಗಿದೆಯೆಂದು ಹೇಳಲಿಲ್ಲವೇ? ಕೆಲವು ನೌಕರರು ಹೆಚ್ಚಿಗೆ ಬೇಕೆಂದು ಬಯ ಸಿದ್ದೆ. ಆದರೆ ಇದ್ದವರಲ್ಲೇ ಕೆಲವರನ್ನು ಕಡಿಮೆಮಾಡಿದರು. ಈ ಶಿಕ್ಷಣದ ದಿವಾಳಿಯಾದಂತೆ ಕಂಡುಬರುತ್ತಿದೆ. ೨೫ ರೂಪಾಯಿಗಾಗಿ B. A M, A. ರಾತ್ರಿ ಹಗಲು ಮಾಡುತ್ತಿದ್ದಾರೆ. ಎಷ್ಟೋ ಮಂದಿಗೆ ಕೇಳುವವರೇ ಇಲ್ಲ. ಕೆಲದಿನದಲ್ಲಿ ಕಲಿತ ಹೆಂಗಸರಿಗೂ ಇದೇ ಗತಿಯಾದೀತು. ನಿಮ್ಮಕ್ಕನ ಮಾತು ಕೇಳಿ ಈ ನೌಕರಿಗೆ ಸೇರಿದ್ದೇ ಒಳಿತಾಯಿತು. ಇಲ್ಲವಾದರೆ ಕೈಯಲ್ಲಿ ಆರ್ಜಿ ಹಿಡಿದು ಮನೆಮನೆ ಅಲೆಯಬೇಕಾಗುತ್ತಿತ್ತು."

" ನನ್ನ ಅಕ್ಕನ ಮಾತಿನಂತೆ ನಡೆದರೆ ಕ್ಷೇಮವಾಗುವಂತೆ ಕಾಣುತ್ತಿದೆ ಅದಕ್ಕಾಗಿ ನನಗೂ ಇಷ್ಟು ಉಪದೇಶವನ್ನು ಮಾಡಲು ಇಂದು ಆಕೆಯನ್ನು ಕಳುಹಿಸಿ ಕೊಡಬೇಕಾದೀತು."

" ಅಲ್ಲಿ ಯಾರಾದರೂ ಉಪದೇಶ ಕೇಳುವವರಿದ್ದಾರೆಯೋ!"

"ನನ್ನ ಭಾವೀ ಪತಿಗೆ ಉಪದೇಶ ಮಾಡಬೇಕಂತೆ " ಉಮೆ ಯೆಂದಳು.

" ಹಾಗಾದರೆ ಕಬೀರನಂತೆ ನಾನು ನಿನ್ನನ್ನು ಹೊತ್ತು ತಿರುಗಬೇಕಾ ಯಿತಲ್ಲ!"

ಕಲೆಯು ಮನದಲ್ಲಿಯೇ ಅಂದುಕೊಂಡಳು:— " ಇಂದು ಉಮೆಯು ಗರ್ವಾಪಹರಣವಾಗಲೇಬೇಕು. ಯಾರು ಗೆದ್ದರೂ ನನ್ನ ಗೆಲುವೇ ಆದಂತೆ ಇಬ್ಬರಲ್ಲಿ ಯಾರಾದರೂ ಸೋಲಲೇಬೇಕು. ಅದರಿಂದ ನನಗೆ ಗೆಲುವಾಗಲೇ ಬೇಕು."

೨

ವ್ರಜೇಶನ ಗುಣಸ್ವಭಾವದ ಬಗ್ಗೆ ಕಲೆಯ ತಂದೆಗಿದ್ದ ಗೌರವದಷ್ಟೇ ತಿರಸ್ಕಾರ ಆಕೆಯ ತಾಯಿಗಿತ್ತು. ಆತನ ಟೆನ್ನಿಸ್ಸು, ಫುಟಬಾಲು ಒಂದೂ ಸೇರುತ್ತಿರಲಿಲ್ಲ.

ವ್ರಜೇಶನ ತಂದೆ ನೌಕರಿ ಮಾಡಿದುದು ಸೈನ್ಯದಲ್ಲಿ. ಆದರೂ ಮಗ ಡಾಕ್ಟರನಾಗಬೇಕೆಂದು ಅವನ ಇಚ್ಛೆ. ಅಕಸ್ಮಾತ್ತಾಗಿ ತಂದೆ ತೀರಿದ. ತಾಯಿಯೋ ತನ್ನ ಗಂಡನ ಇಚ್ಛೆಯನ್ನು ನೆರವೇರಿಸಬೇಕಾಯಿತು. ವ್ರಜೇಶ ಸೈನ್ಯ ಶಿಕ್ಷಣವನ್ನೂ ಪಡೆದ; ಡಾಕ್ಟರಿಯನ್ನೂ ಪಾಸು ಮಾಡಿದ. ಇನ್ನೂ ಆತ ಅವಿವಾಹಿತ

ಝಾಂಸಿಯ ಸರಕಾರಿ ಬಂಗಲೆಯಲ್ಲಿ ಆತ ತಾಯಿಯೊಡನೆ ಇರುತ್ತಿದ್ದ. ಕಲೆಯ ತಂದೆ ಯಾದ ಅಶೋಕ ಕುಮಾರನಿಗೆ ಅಲ್ಲಿ ವರ್ಗವಾಗಿ ಏಳು ವರ್ಷ ವಾಗಿತ್ತು. ಆತನಿಗೂ ವ್ರಜೇಶನ ತಂದೆಗೂ ತುಂಬ ಪ್ರೀತಿ. ಜಾತಿ-ನೀತಿ ಗಳೆಲ್ಲ ಅಸ್ವಾಭಾವಿಕವೆಂದೂ ಹಾಸ್ಯಕರವೆಂದೂ ಅವರ ಮತವಾದುದರಿಂದ ಅದನ್ನು ಮುರಿಯಬೇಕೆಂದು ನಿಶ್ಚಯಿಸಿದ್ದರು. ಆದರೆ ಅವರು ಮದುವೆ ಯಾದುದು ಮಾತ್ರ ತಮ್ಮ ತಮ್ಮ ಜಾತಿಯವರನ್ನೇ. ಆದರೆ ತಮ್ಮ ಮಕ್ಕ ಳಾದರೂ ಈ ತೊಂದರೆಯಿಂದ ದೂರವಾಗಿರಬೇಕೆಂದು ಅವರ ಇಚ್ಛೆಯಿತ್ತು. ಅಷ್ಟರಲ್ಲಿ ವ್ರಜೇಶ ತೀರಿದುದರಿಂದ ಅಶೋಕ ಕುಮಾರನ ಈ ವಿಚಾರ ನನೆ ಗುದಿಗೆ ಬಿದ್ದಂತಾಗಿತ್ತು.

ಈಗ ಕಲೆಯು ಪ್ರಾಪ್ತವಯಸ್ಕಳಾಗಿದ್ದಾಳೆ. ತಾಯಿ ಗಂಡನಿಗೆ ಕಲೆಯ ವಿವಾಹ ಮಾಡಲು ಒತ್ತಾಯ ಮಾಡುತ್ತಿದ್ದಾಳೆ. ಆದರೆ ಸ್ವಯಂವ ರವೇ ಯೋಗ್ಯವೆಂದು ಆತ ತಿಳಿದುದರಿಂದ ವಿವಾಹಕ್ಕಾಗಿ ಅಷ್ಟೊಂದು ಆತು ರವನ್ನು ತೋರಿಸುತ್ತಿರುವುದಿಲ್ಲ.

ವ್ರಜೇಶ ಇಲ್ಲಿಗೆ ಬಂದ ಬಳಿಕ ಆತನ ತಂದೆಯ ಜ್ಞಾಪಕವಾಯಿತು. ಆ ಬಳಿಕ ಒಮ್ಮೆ ವ್ರಜೇಶನ ಭೆಟ್ಟಿಯೂ ಆಯಿತು. ಆ ಮಾತು ಈ ಮಾತು ಆಡಿದ ನಂತರ "ನೀನು ಇನ್ನೂ ತನಕ ಇತ್ತ ಬಂದಿಲ್ಲವೇಕೆ?" ಎಂದು ಕೇಳಿದ.

"ನಾಳೆ ಬರಲು ಯತ್ನಿಸುತ್ತೇನೆ" ಎಂದು ವ್ರಜೇಶ ಮೂರನೇ ದಿನ ಅಲ್ಲಿಗೆ ಹೋದ. ಆ ಮೇಲೆ ಇನ್ನೆರಡು ಸಲ ಹೋಗಿ ಬಂದ. ನಂತರ ತನ್ನ ತಾಯಿಯೊಡನೆ ಅಲ್ಲಿಯ ಸುದ್ದಿಯನ್ನೆಲ್ಲ ಉಸುರಿದ.

"ಅವರ ಒಪ್ಪಿಗೆ ನಿನ್ನ ಇಚ್ಛೆಯಿದ್ದರೆ ನನ್ನದೇನು ಅಡ್ಡಿ? ನಾನೊಮ್ಮೆ ಹುಡುಗಿಯನ್ನು ನೋಡಿ ಬರುವೆ. ನಿನ್ನ ತಂದೆಯವರ ಅಭಿಪ್ರಾಯವೂ ಹಾಗೆಯೇ ಇತ್ತು."

"ಆಕೆ ನಿನ್ನ ಮನಸ್ಸಿಗೆ ಬರುವುದು ಅಷ್ಟರಲ್ಲೇ ಇದೆ. ಆವಳು ಹಳೆಯ ರೀತಿ ಆಚಾರಗಳನ್ನು ಮನ್ನಿಸುವವಳಲ್ಲ. ರೂಪದಂತೆಯೇ ಗುಣವೂ ಇದೆ."

"ನೀನಾದರೂ ಹಳೆಯವರ ರೀತಿಯನ್ನೆಲ್ಲಿ ಮನ್ನಿಸುತ್ತೀ? ತಂದೆ ತಾಯಿಗಳಿಗೆ ಒಬ್ಬಳೇ ಮಗಳಾದುದರಿಂದ ಮುದ್ದಿನಲ್ಲಿ ಬೆಳೆದವಳಿರಬೇಕು. ಆದರೂ ಆಕೆಗೆ ಇಲ್ಲಿ ಅಂತಹ ಕಷ್ಟಪಡಬೇಕಾದುದೇನೂ ಇಲ್ಲ. ನೀನಾದರೂ ಇಷ್ಟೊಂದು ದುಡಿದು, ಮಾಡುವದೇನಿದೆ?"

"ಒಳ್ಳೇ ಮಾತಾಡುತ್ತೀಯಮ್ಮಾ; ಎಲ್ಲವನ್ನೂ ಅವಳ ವಿಲಾಸಕ್ಕೆ ವೆಚ್ಚಮಾಡಲೇ? ಈ ದೇಶವೆಂತಹ ಕಷ್ಟದಲ್ಲಿದೆಯೆಂದು ಬಲ್ಲಿಯಾ?"

"ಮತ್ತೆ ಅದೇ, ಸೇವೆಯ ಮಾತು. ಮನೆಗೆದ್ದು ಮಾರುಗೆದಿಯಬೇಕು ಮಗು!"

"ಮಗೂ ಹೀಗೆ ಆಡಬೇಡ" ತಾಯಿಗೆ ದುಃಖವಾಯಿತು.

"ಅಮ್ಮಾ! ಹೇಳಿ ಕೇಳುವದೇನೂ ಈಗ ಉಳಿದಿಲ್ಲ. ಎಲ್ಲ ನಮ್ಮ ಕಣ್ಣ ಮುಂದೇ ಇದೆ. ಇನ್ನು ಮೇಲೆ ನಾನವರ ಮನೆಗೆ ಹೋಗುವದಿಲ್ಲ"

"ಇದು ಸರಿಯಲ್ಲ; ನೀನು ಹೋಗಲೇಬೇಕಾದೀತು. ಭಾವನಾ ರಾಜ್ಯದಲ್ಲಿ ವಿಹರಿಸಬೇಡ. ಸತ್ಯ ಜಗತ್ತಿಗೆ ಬಾ. ಮನಸ್ಸು ಆಕಾಶದಲ್ಲಿ ವಿಹರಿಸಿದರೂ ದೇಹ ಇದ್ದಲ್ಲಿಯೇ ಕೆಲಸಮಾಡಬೇಕಾಗುತ್ತದೆ."

ಈ ಮಾತು ನಡೆದು ಒಂದುವಾರ ಗತಿಸಿತು. ಆ ಮೇಲೆ ವ್ರಜೇಶ ತಾಯಿಯೊಡನೆ "ಅಮ್ಮಾ, ನಾನ ಅಲ್ಲಿಗೆ ಹೋಗಲಿರುವೆ. ನೀನೂ ಬರುವದಾದರೆ ಬಾ. ಟಾಂಗಾ ತರಿಸುವೆ. ಅವರೂ ನಿನ್ನನ್ನು ಕರೆದುಕೊಂಡು ಬರಲು ಆಗ್ರಹಪಡಿಸಿದ್ದಾರೆ.

"ಇದು ಹೇಗಾದೀತು. ಅವಳನ್ನು ಇಲ್ಲಿಗೆ ಕಳುಹಿಸಲು ಮನಸ್ಸಿಲ್ಲ ದಿದ್ದರೆ, ಹತ್ತಿರದಲ್ಲಿಯ ಗೋಪಾಲಬಾಗಕ್ಕೆ ಕಳುಹಿಸಲಿ."

"ಈ ಸುದ್ದಿ ಯಾರು ಹೇಳುವವರು."

"ನಾನು ಚೀಟಿ ಕೊಡುತ್ತೇನೆ."

"ಉಹುಂ ನಾನು ತೆಗೆದುಕೊಂಡು ಹೋಗಲಾರೆ."

"ಆಗಲಿ, ನಾನೇ ಬರುವೆ. ಆದರೆ ನೆರೆಮನೆಯ ಇಬ್ಬರು ಹೆಂಗಸ ರನ್ನು ಕರೆದುಕೊಂಡು ಬರುವೆ. ಅಂದರೆ ನಾನು ಯಾರೆಂದು ಅವರಿಗೆ ಗೊತ್ತಾಗಲಿಕ್ಕಿಲ್ಲ."

"ಬೇಡ ಬೇಡ, ಅಮ್ಮಾ ಇದು ಸರಿಯಲ್ಲ."

ನಿನಗಿಂತ ನಾನು ಹೆಚ್ಚು ಬಲ್ಲೆ. ಅದರ ಉಸಾಬರಿ ನಿನಗೆ ಬೇಡ" ಎಂದವಳೇ ಹೊರಡುವ ಸಿದ್ಧತೆ ಮಾಡಹತ್ತಿದಳು.

೨.

ಲಖನೌದಲ್ಲಿ ಓದುತ್ತಿರುವಾಗ ವ್ರಜೇಶನಿಗೆ ಅಕಸ್ಮಾತ್ತಾಗಿ ಶದಿತ ಬಾಲಾಳ ಪರಿಚಯವಾಗಿತ್ತು. ಈತನೇ ಆಕೆಗಿಟ್ಟ ಹೆಸರು ಅದು. ಆತ ಒಮ್ಮೆ ಸ್ವಯಂಸೇವಕ ಸಮಿತಿಯ ಮುಖ್ಯಸ್ಥನಾಗಿದ್ದ. ಆಕೆ ಒಂದು ಜಾತ್ರೆಯ ವ್ಯವಸ್ಥೆ ನೋಡಿಕೊಳ್ಳುತ್ತಿದ್ದಳು. ಅಲ್ಲಿಯ ಕೆಲವು ಪುಂಡರು ತಮ್ಮಲ್ಲಿ ಮಾತನಾಡಿಕೊಂಡು ಗದ್ದಲವೆಬ್ಬಿಸಿದರು. ವ್ರಜೇಶನ ಸಮಿತಿಯವ ರಿಂದ ಅದನ್ನು ಹತೋಟಿಯಲ್ಲಿ ತರಲಾಗಲಿಲ್ಲ. ಅಷ್ಟರಲ್ಲಿ ಸ್ವಯಂಸೇವಕಿ ಯರ ಒಂದು ಗುಂಪು ಬಂದು ಪರಿಸ್ಥಿತಿಯನ್ನು ಸುಧಾರಿಸಿತು. ಅಂದಿನಿಂದ ವ್ರಜೇಶ ಆ ಸೇವಿಕೆಯರ ಮುಖ್ಯಸ್ಥಳನ್ನು ಗೌರವದಿಂದ ಕಾಣಹತ್ತಿದ. ಅದೇ ಪರಿಚಯಕ್ಕೆ ಕಾರಣವಾಯಿತು.

ಮುಂದೆ ಅವಳ ಮನೆಯ ಸ್ಥಿತಿಗತಿಯನ್ನೆಲ್ಲ ಕಂಡು ಆತ ಚಕಿತನಾದ. ಮನೆಯಲ್ಲಿ ಆಕೆಯ ತಾಯಿ, ಇನ್ನೆರಡು ಮಕ್ಕಳು. ತಾಯಿ ಕಲಿತವಳಿದ್ದಳು. ಶದಿತಬಾಲಾಳು ಸಮಿತಿಯಿಂದ ಜೀವನ ವೇತನವನ್ನು ಪಡೆದು ಹೇಗೋ ದಿನ ದೂಡುತ್ತಿದ್ದಳು. ಇಂತಹ ಕಠಿಣಸ್ಥಿತಿಯಲ್ಲಿಯೂ ಸಮಿತಿಯೇ ತನ್ನ

ಸರ್ವಸ್ವವೆಂದು ತಿಳಿದು ದುಡಿಯುತ್ತಿದ್ದಳು. ಮನೆಯವರಿಗಾಗಿ ಇತರ ವ್ಯವಸಾಯವನ್ನು ಕೈಕೊಳ್ಳಲಿಕ್ಕೂ ಆಕೆ ಬಯಸುತ್ತಿರಲಿಲ್ಲ.

ಆಕೆಯ ತಾಯಿ ಮಗಳಿಗಿಷ್ಟು ಬುದ್ಧೀ ಹೇಳಿ ಹಾದಿಗೆ ತರಲು ವ್ರಜೇಶನಿಗೆ ಬಿನ್ನವಿಸಿಕೊಂಡಳು. ಆದರೆ ಮಗಳು ಒಪ್ಪುವಂತಿಲ್ಲವೆಂದೂ ಅರಿತಿದ್ದಳು.

ತಾಯಿಯ ಕಲ್ಪನೆಯಂತೆಯೇ ಆಯಿತು. "ನನ್ನ ನಿರ್ಧಾರವನ್ನು ಎಂದಿಗೂ ಬದಲಿಸಲಾರೆ. ನೀವೆಷ್ಟೇ ರೀತಿಯಿಂದ ಹೇಳಿದರೂ ಮನ್ನಿಸಲಾರೆ" ಎಂದು ತಡಿತಬಾಲೆಯೆಂದಳು.

ಆ ಮೇಲೆ ತನ್ನ ತಮ್ಮ ತಂಗಿಯನ್ನು ಕರೆದು ಓದಹಚ್ಚಿದಳು.

ಒಂಪು ವರ್ಷ ಗತಿಸಿತು. ಈ ಅವಧಿಯಲ್ಲಿ ವ್ರಜೇಶ ವಿಶ್ವಾಸಾರ್ಹನೆಂದು ತಡಿತಬಾಲೆಗೆನಿಸಿತು. ಒಮ್ಮಿಂದೊಮ್ಮೆಯೇ ಆಕೆಯನ್ನು ಸೇವಾಸಂಘದ ಕೆಲಸದಿಂದ ಹೊರಹಾಕಿದರು. ಇನ್ನಾವ ಜೀವನೋಪಾಯವೂ ಇರಲಿಲ್ಲ. ತಾಯಿ ತಮ್ಮಂದಿರೆಲ್ಲ ಸಾಯುವ ಪ್ರಸಂಗ. ಯಾರೊಬ್ಬರ ಮುಂದೆ ಕೈಯೊಡ್ಡುವ ಸ್ವಭಾವವಲ್ಲ ಅವರದು.

ಈ ಸುದ್ದಿ ತಿಳಿದು ವ್ರಜೇಶ ಬಂದ. ಆಕೆಯನ್ನು ತೆಗೆದು ಹಾಕಿದ ಕಾರಣವಾವುದೆಂದು ಆತನಿಗೆ ತಿಳಿಯಲಿಲ್ಲ. ಅದಕ್ಕಾಗಿ ಕಾರ್ಯದರ್ಶಿಯೊಡನೆ ಹೋಗಿ ವಿಚಾರಿಸಿದ. ಆದರೆ ಅಲ್ಲಿಂದ ಅಪಮಾನಿತನಾಗಿ ಹಿಂದೆ ಬರಬೇಕಾಯಿತು. "ನಿನ್ನ ಸಲುವಾಗಿಯೇ ಆಕೆಯನ್ನು ತೆಗೆದುಹಾಕಿದ್ದು" ಎಂದು ಅಲ್ಲಿಯ ಕಾರ್ಯದರ್ಶಿ ಹೇಳಿದ.

ಈ ಎಲ್ಲ ಘಟಣೆ ನಡೆದ ಮೇಲೆಯೇ ತಡಿತಬಾಲೆಯು ನಿಃಪಾಯಳಾಗಿ ವ್ರಜೇಶನೊಡನೆ ಮಾತಾಡಿದ್ದು. "ನನ್ನ ತಂದೆ ಇಂಗ್ಲೀಷಿನಲ್ಲಿ ಲೇಖಕರಿದ್ದರು. ಅವರು ಹಿಂದಿಯಲ್ಲಿಯೂ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಇವರು ಬರೆದ ಹಸ್ತಪ್ರತಿಯನ್ನು ನಮ್ಮ ಸಂಬಂಧಿಕರಲ್ಲಿ ಯಾರಾದರೂ ಒಯ್ಯುತ್ತಿದ್ದರು. ಆದರೆ ನಾವಿಬ್ಬರು ಅಕ್ಕತಂಗಿಯರಿರುವುದರಿಂದ ಎಲ್ಲಿಯಾದರೂ ಪಾಲನ ಪೋಷಣೆಯ ಭಾರ ಬಿದ್ದೀತೆಂದು ಯಾರೂ ಹತ್ತಿರ ಸುಳಿಯಲಿಲ್ಲ."

"ಹಾಗಾದರೆ ನನ್ನ ಹತ್ತಿರ ತನ್ನಿ. ಈ ಹೊತ್ತೇ ಪ್ರಕಾಶಕರೊಡನೆ ಮಾತಾಡಿ ಬರುವೆ."

"ಓಹೋ, ಅದೇನು ದೊಡ್ಡದು? ಕೆಮರಾದಿಂದ ತೆಗೆದ ಚಿತ್ರ ಚಿತ್ರವೇ ಅಲ್ಲ; ಕಲೆಯು ತೆಗೆದ ಚಿತ್ರ ನೋಡಿ ಮುಗ್ಧರಾಗುವಿರಿ" ಎಂದು ಉಮೆ ಎಂದಳು.

"ಹಾಗಾದರೆ, ಅಡಿಗೆ-ಗಿಡಿಗೆ?"

"ಅದೂ ಹಾಯಿಗೇ? ಈಗಲೇ ನಿಮಗೆ ಅದರ ರುಚಿ ತೋರಿಸುತ್ತೇವೆ"

"ಅದನ್ನೂ ನೋಡುತ್ತ ಕೂಡ್ರಬೇಕಾದೀತೇ?" ಎಂದಳು. ನೆರೆ ಯುವತಿಯೊಬ್ಬಳು.

"ಚಿತ್ರ ನೋಡುತ್ತ ಕೂಡ್ರಬೇಕೆಂಬ ಮನಸ್ಸು ನೋಡುವವನಿಗಾದರೆ ಚಿತ್ರ ಸಾರ್ಥಕವಾದಂತೆ. ಅಡಿಗೆಯ ವಿಷಯದಲ್ಲಿಯೂ ಹಾಗೆಯೇ. ತಿಂದಷ್ಟೂ ಬೇಕು ಎಂದೆನಿಸಿದರೆ ಮಾತ್ರ ಸಫಲವಾದಂತೆ"ಉಮೆಯು ನಗುತ್ತ ಉತ್ತರವಿತ್ತಳು.

ಬಂದವಳೊಬ್ಬಳ ಮಗಳು ಎಫ್. ಎ. ಓದುತ್ತಿದ್ದಳು. ಅವಳು ಕೇಳಿದ ಮಾತು ಹೀಗೆ.

"ನೀವೇನು ನಿಮ್ಮ ಮಗಳನ್ನು ಕಾಲೇಜಿಗೆ ಕಳಿಸಿದಂತಿಲ್ಲವಲ್ಲ!"

"ಮೇಲಿಂದ ಮೇಲೆ ಸ್ಥಳಾಂತರವಾಗುತ್ತಿದ್ದುದರಿಂದ ಹಾಗಾಗಿರಬೇಕು" ಇನ್ನೊಬ್ಬಳ ಉತ್ತರ.

"ಹಾಗಲ್ಲ; ನನ್ನ ಮಗಳಿಗೆ ಕಾಲೇಜು ಶಿಕ್ಷಣವಾಗಿದೆ. ಯುನಿವರ್ಸಿಟಿಯ ಕೊನೆಯ ಪರೀಕ್ಷೆಯಲ್ಲಿ ಆಕೆ ಪಾಸಾಗಿದ್ದಾಳೆ. ಆಕೆ ಬೋರ್ಡಿಂಗಿನಲ್ಲಿದ್ದಳು." ಎಂದು ಕಲೆಯ ತಾಯಿಯೆಂದಳು.

"ಬೋರ್ಡಿಂಗಿನಲ್ಲೆಲ್ಲ ಹುಡುಗರೇ ಇರುತ್ತಾರಂತೆ."ಒಬ್ಬಳ ಉದ್ಗಾರ.

"ನಿನಗಿಷ್ಟೂ ತಿಳಿಯದೆ? ಹುಡುಗರು, ಹುಡುಗಿಯರು ಬೇರೆ ಬೇರೆ ಇರುತ್ತಾರೆ."

"ಬೇರೆ ಬೇರೆ ಎಲ್ಲ ಇರುತ್ತಾರೆ? ನಾನೆಲ್ಲ ಬಲ್ಲೆ. ಒಂದೇ ಕಡೆಯಲ್ಲಿ ಇರುತ್ತಾರೆ. ಹೋದ ವರ್ಷ ಒಬ್ಬ ಹುಡುಗ ಅಲ್ಲಿಯ ವ್ಯವಸ್ಥಾಪಿಕೆಗೆ ಹೊಡೆದು ಹಾಕಿದ್ದನಂತೆ."

"ಇದೆಲ್ಲ ಸುಳ್ಳು; ಯಾರೋ ಹಬ್ಬಿಸಿದ ಸುದ್ದಿ."

“ ನಾನು ಹೇಳುವ ಸಂಗತಿ ನಿನಗೆ ಗೊತ್ತಿರಲಿಕ್ಕಿಲ್ಲ. ನೀನು ಇನ್ನಾವುದೋ ಊರಿನ ಸುದ್ದಿ ಹೇಳುತ್ತಿರಬಹುದು.”—ಇತ್ಯಾದಿಯಾಗಿ ವ್ರಜೇಶನ ತಾಯಿಯ ಜೊತೆಗೆ ಬಂದ ಹೆಂಗಸರಲ್ಲೇ ವಾದವಿವಾದ ನಡೆಯಿತು. ಇದನ್ನು ಕಂಡು ಉಮೆ ನಕ್ಕಳು. ನಂತರ ಎಲ್ಲರಿಗೂ ನಗು ಬಂದಿತು.

ಅತ್ತ ಕಲಾಳ ತಂದೆ ಹಾಗೂ ವ್ರಜೇಶರಲ್ಲಿ ಮಾತು ಕತೆ ನಡೆದಿತ್ತು. “ ನೋಡು, ನಿಮ್ಮ ತಂದೆಯ ಬಯಕೆಯಂತೂ ನನ್ನ ಮಗಳನ್ನು ತನ್ನ ಮಗನಿಗೆ ತಂದುಕೊಳ್ಳಬೇಕೆಂದಿತ್ತು. ನಿನಗೂ ಜಾತಿ ಗೀತಿಯ ತೊಡಕು ತೊಂದರೆಗಳಿಲ್ಲವಷ್ಟೇ!”

“ ನನಗಾವ ಬಂಧನವೂ ಇಲ್ಲ. ತಂದೆಯ ಇಚ್ಛೆಯೇ ಹಾಗಿದ್ದುದಾದರೆ ತಾಯಿಯೂ ಅಡ್ಡಿ ಮಾಡಳು. ಆದರೂ ಸದ್ಯ ಒಂದು ಆರು ತಿಂಗಳು ತಡೆದು ಲಗ್ನವಾದರಾಗದೇ ?.......”ಎಂದ ವ್ರಜೇಶ.

“ ಅದರಿಂದಾಗುವ ಲಾಭವಾದರೂ ಏನು? ಶುಭಸ್ಯ ಶೀಘ್ರಂ ಒಮ್ಮಿಂದೊಮ್ಮೆಲೇ ನಿಮ್ಮ ವಿಚಾರ ಬದಲಾಗುವ ಸಂಭವವೂ ಇರಬಹುದು. ಹೆತ್ತವರಿಗೆ ಮಕ್ಕಳ ಲಗ್ನವಾಗುವ ವರೆಗೆ ಮನಶ್ಶಾಂತಿ ಇರುವದಿಲ್ಲ. ಮೂರು ನಾಲ್ಕು ಹುಡುಗಿಯರಿದ್ದರಂತೂ ತೀರಿಹೋಯಿತು. ಅವರ ಸರ್ವನಾಶವಾದಂತೇ ಸರಿ. ”

“ ನಿಮಗೇನು ಆ ಅಂಜಿಕೆ ಇಲ್ಲವಷ್ಟೇ ? ”

“ ನನಗಿನ್ನೂ ಅನೇಕ ಕೆಲಸ ಮಾಡತಕ್ಕದ್ದದೆ ನಿಮ್ಮ ತಂದೆ ನಾನೂ ಕೂಡಿ ಅನೇಕ ಯೋಜನೆಗಳನ್ನು ತಯಾರಿಸಿದ್ದೆವು. ಈಗ ಅವರಿಲ್ಲ. ಅದರಿಂದ ನೀನೇ ಎಲ್ಲ ರೀತಿಯಿಂದ ನನಗೆ ನೆರವು ಕೊಡಬೇಕಾದೀತು. ಸರ್ವ ಜಾತೀಯ ಸಂಘಟನೆ ಹಾಗೂ ನಮ್ಮ ಸಂಸ್ಕೃತಿ ರಕ್ಷಣೆಯು ಅತ್ಯವಶ್ಯವೆಂದು ನಿನಗನಿಸುವದಿಲ್ಲವೇ ? ”

“ ನನಗೆ ಜಾತಿ ಗೀತಿ ಒಂದೂ ಗೊತ್ತಿಲ್ಲ. ಮಾನವ ಜಾತಿ–ಮಾನವ ಸಂಸ್ಕೃತಿ.”

“ ನಾನೂ ಒಪ್ಪುತ್ತೇನೆ. ನಾವೆಲ್ಲ ಮಾನವರೆಂದು ನಾನೂ ಒಪ್ಪುತ್ತೇನೆ. ಆದರೆ ದೇಶ ಕಾಲ ಪರಿಸ್ಥಿತಿಯಂತೆ ಅವುಗಳಲ್ಲಿ ಘುಸು ಹೆಚ್ಚುಕಡಿಮೆಯಾಗಬೇಕಾದದು ಅನಿವಾರ್ಯ.”

" ಹಾಗಲ್ಲ; ಯಾತರಲ್ಲಿ ಮಾನವ್ಯದ ಪ್ರಮಾಣವು ಹೆಚ್ಚಿರುತ್ತದೆಯೋ ಅದೇ ಶ್ರೇಷ್ಠವಾದುದು. ಅದು ಯಾವುದೇ ದೇಶದಲ್ಲಿರಲಿ, ಯಾವುದೇ ಧರ್ಮದಲ್ಲಿರಲಿ; ಇಂತಹ ಜನ ತೀರ ವಿರಳರೆಂಬುದನ್ನು ಬಲ್ಲೆ. ಇಂತಹರೇ ನರಮನುಷ್ಯ ಒಂದೆ ಜಾತಿ ಇಲ್ಲವೆ ಜಲಧಿ ವರೆಗೂ ಒಂದೇ ಕುಲ ಎಂಬುದಕ್ಕೆ ಅಸ್ತಿವಾರವಿದ್ದಂತೆ. ಅಂತಹರಿಗೇ ಸರ್ವೋಚ್ಚ ಸಿಂಹಾಸನದಲ್ಲಿ ಸ್ಥಾನ ಸಿಕ್ಕೀತು."

" ಯಾತರಿಂದ ಮಾಡುವಿರಿ ಆ ಸಿಂಹಾಸನ ! "

" ಮಾನವ ಹೃದಯದಿಂದ. "

ಆ ಬರೇ ಮಾನವತೆ ಎನ್ನುವುದರಿಂದ ಪ್ರಯೋಜನವಿಲ್ಲ; ಇತರರಿಗೆ ಅನ್ಯಾಯ ಮಾಡಿದಂತೆ. ಇಂದು ಮಾನವತೆಗೆ ಬಡಿದಾಡುವವರೇ ಮುಂದೆ ದಾನವತೆಗೆ ಬಡಿದಾಡಲೂ ಬಹುದು. ನನ್ನ ವಿಚಾರವನ್ನೇ ಒಪ್ಪಬೇಕೆಂದು ನಿನ್ನನ್ನು ಒತ್ತಾಯಪಡಿಸುವದಿಲ್ಲ. ನಮ್ಮ ವಿಚಾರ ಭಿನ್ನವಾದ ಮಾತ್ರಕ್ಕೆ ವ್ಯಕ್ತಿಗಳನ್ನೆಲ್ಲ ದ್ವೇಷಿಸಬೇಕೆಂದಿಲ್ಲ; ಹೀಗಿರುವುದು ಸ್ವಾಭಾವಿಕವೇ ಆಗಿದೆ. ಇದರಿಂದಲೇ ಉನ್ನತಿಯಾಗುತ್ತಿದೆ. ನಾವು ಕೂಡಿದಾಗ ಪರಸ್ಪರ ವಿಚಾರ ವಿನಿಮಯ ಮಾಡೋಣವಂತೆ. ಅದಕ್ಕಾಗಿ ಮದುವೆಯನ್ನು ಮುಂದೂಡುವುದರಲ್ಲೇನರ್ಥವಿದೆ ? "

ಅಷ್ಟರಲ್ಲಿ ರನ್ನರನು ಬಂದು ವ್ರಜೇಶನ ಕೈಗೆ ತಾರು ಕೊಟ್ಟ. ಅದರಲ್ಲ ನಾನು ರಾತ್ರಿ ಹನ್ನೆರಡಕ್ಕೆ ಝಾಂಸಿಗೆ ಬಂದು ಮುಟ್ಟುವೆ. ಸ್ಟೇಶನದಲ್ಲಿ ಭೆಟ್ಟಿಯಾಗಿರಿ"ಎಂದಿತ್ತು. ಆ ತಾರು ಬಾಲೆಯಿಂದ ಬಂದುದಾಗಿತ್ತು.

" ಏನದು? "

" ಬಾಲೆ ಬರುತ್ತಾಳಂತೆ— ರಾತ್ರಿ ಹನ್ನೆರಡಕ್ಕೆ ಬರುವಳಂತೆ " ಅವನ ಸ್ವರ ಅಪರಾಧಿಯ ಸ್ವರದಂತೆ ಆಗಿದ್ದಿತು.

" ಬಾಲೆ ಎಂದರೆ ಯಾರು ?"

ಅವಳನ್ನೇ ಕರೆದುಕೊಂಡು ಬಂದು ಎಲ್ಲವನ್ನೂ ಹೇಳುವೆ. ನಾನೀಗ ಹೋಗಿ ಬರುವೆ. "

"ಇಲ್ಲ, ಊಟಮಾಡದೆ ಇಲ್ಲಿಂದ ಹೋಗಲಾರಿರಿ. ಏ, ಉಮಾ, ಇನ್ನೂ ಅಡಿಗೆ ತಯಾರಾಗಿಲ್ಲವೇ?"

"ಆಗಲೇ ಸಿದ್ಧವಾಗಿದೆ ಬನ್ನಿ" ಎಂದಳು

ಬಾಲೆಯು ಬಂದು ಹನ್ನೊಂದು ದಿನವಾಗಿತ್ತು. ಅಂದು ಸಾಯಂಕಾಲ ಗೋಪಾಲಬಾಗದಲ್ಲಿ ಉಮೆ ಮತ್ತು ಕಲೆ ಇಬ್ಬರೂ ಆಕೆಯನ್ನು ಭೆಟ್ಟಿಯಾದರು.

"ನಿಮ್ಮನ್ನು ಕಾಣುವುದಕ್ಕಾಗಿಯೇ ನಾವಿಬ್ಬರೂ ಅಕ್ಕತಂಗಿಯಂದಿರು ಇಲ್ಲಿ ಬಂದಿದ್ದೇವೆ ವ್ರಜೇಶರಾಯರು ನಮ್ಮ ಭೆಟ್ಟಿ ಮಾಡಿಸಬಹುದೆಂದು ತಿಳಿದಿದ್ದೆವು. ಆದರೆ ಅವರು ಹಾಗೆ ಮಾಡಲಿಲ್ಲ" ಎಂದು ಉಮೆಯೇ ಮಾತಿಗೆ ಮೊದಲಿಟ್ಟಳು

ಬಾಲೆಗೆ ಆಶ್ಚರ್ಯವಾಯಿತು ಆದರೂ ಅದನ್ನು ತೋರಗೊಡದೆ "ಅವರು ನಿಮ್ಮ ವಿಷಯವಾಗಿ ನನ್ನೊಡನೆಯಾದರೂ ಹೇಳಬೇಕಿತ್ತು ನಾನು ಹಿಂದುವಲ್ಲವೆಂದು ಅವರು ಹೇಳದಿರಬಹುದು. ರೂಢಿ ಆಚಾರಗಳಂತೆ ವರ್ತಿಸುವ-ಇತರರನ್ನು ತಮ್ಮವರಂತೆ ಕಾಣದವರ ಬಳಿ ಅವರೆಂದೂ ಕರೆದುಕೊಂಡು ಹೋಗಿರುವದಿಲ್ಲ ಆದರೆ ಹೀಗಾಗಿ ಕರೆಸಿದರೂ ಅವರು ಕರೆದುಕೊಂಡು ಹೋಗದಿದ್ದುದು ಅವರ ತಪ್ಪೆಂದು ಒಪ್ಪಲೇಬೇಕಾಗುತ್ತಿದೆ. ಬನ್ನಿ, ನಿಮ್ಮನ್ನು ಕಂಡು ತುಂಬಾ ಸಂತೋಷವಾಯಿತು ಇಲ್ಲಿಯ ನಾಲ್ಕಾರು ಜನರೊಡನೆ ಗುರುತು ಪರಿಚಯಮಾಡಿಕೊಳ್ಳಬೇಕೆಂದು ನನಗೆ ಇಚ್ಛೆಯಿತ್ತು. ಆದರೆ ವ್ರಜೇಶರಾಯರು ನನ್ನನ್ನು ಎಲ್ಲಿಯೂ ಕರೆದುಕೊಂಡು ಹೋಗಿಲ್ಲ"

"ಇಂದಿನ ಹಿಂದುಧರ್ಮವೆಂದರೆ ಅದೊಂದು ಸಮ್ಮಿಶ್ರಣವಿದ್ದಹಾಗೆ. ಅದರಲ್ಲಿ ಎಲ್ಲರೂ ಸಮಾವೇಶವಾಗುತ್ತಾರೆ. ಈ ದೇಶದ ಮಕ್ಕಳೆಲ್ಲ ಹಿಂದೂ ಧರ್ಮದವರೆಂದು ತಿಳಿಯಲು ಯಾವ ಅಭ್ಯಂತರವೂ ಇಲ್ಲ. ಹಳೆಯ ವಿಚಾರದವರೆಷ್ಟೋ ಮಂದಿ ಒಪ್ಪಲಿಕ್ಕಿಲ್ಲವಾದರೂ, ಇಂತಹ ಸರ್ವಧರ್ಮ ಸಮನ್ವಯದ ದಿನವೊಂದು ಬಂದೇ ಬಂದೀತು."

“ನಾವೆಲ್ಲ ಹುಟ್ಟಿ ಬೆಳೆದದ್ದು ಇಂತಹ ಕ್ರಾಂತಿಯ ಯುಗದಲ್ಲಿ, ನಾವೆಲ್ಲ ಈ ಮಾತನ್ನು ಒಪ್ಪುತ್ತೇವೆ. ಆದರೆ ನಿಮ್ಮ ಹಿರಿಯರೆಂದೂ ಈ ಮಾತನ್ನು ಒಪ್ಪಲಾರರು. ನಾನು ನಿಮ್ಮಲ್ಲಿಗೆ ಬಂದರೆ ಮನೆಯನ್ನೆಲ್ಲ ಸಾರಿಸಿ ಧೂಪ ದೀಪ ಹಚ್ಚಬೇಕಾಗುತ್ತದೋ ಏನೋ? ಅನೇಕ ತಲೆಮಾರಿನಿಂದ ನಡೆದುಬಂದ ಈ ರೀತಿಯೇ ಹಿಂದೂ ಧರ್ಮದ ಪತನಕ್ಕೆ ಕಾರಣವಾಗಿದೆ. ಆಗಲಿ, ಅವೆಲ್ಲ ಇರಲಿ. ಬೇರೆ ವಿಷಯಕ್ಕೆ ಬರೋಣ.”

“ನೀವು ನಿಮ್ಮ ಧರ್ಮ ಬಿಡುವದಾದರೆ ನಿಮ್ಮ ಮನೆಯವರೆಂದಾದರೂ ಒಪ್ಪುವರೇ?” ಎಂದು ಕಲೆಯು ಕೇಳಿದಳು.

“ನಾನು ಬೆಳೆದುದು ಇಂತಹ ವಿಚಾರಗಳಲ್ಲಿಯೇ. ಅದಕ್ಕೆ ನನ್ನ ತಂದೆ ಹಾಗೂ ವ್ರಜೇಶರಾಯರೇ ಕಾರಣ. ನಾನು ಸಮಾನತ್ವವನ್ನು ಬಯಸುತ್ತೇನೆ; ಅಷ್ಟೆ. ಧರ್ಮ ಬಿಡಬೇಕೆಂದು ಹೇಳುವದಿಲ್ಲ. ನಮ್ಮ ತಂಗಿಯೊಬ್ಬಳು ಹಿಂದುವಿನೊಡನೆ ಮದುವೆಯಾಗಿ ನಮ್ಮನಿಗೊಂದು ಹಿಂದೂ ಹೆಂಡತಿ ಸಿಗದಿದ್ದರೆ ಅದೆಂದೂ ನನಗೆ ರುಚಿಸದು. ಅಂತಹ ಸಮಾಜದೊಡನೆ ನಾನು ಯಾವ ವ್ಯವಹಾರವನ್ನಿಟ್ಟುಕೊಳ್ಳಲಿಕ್ಕೂ ಬಯಸುವದಿಲ್ಲ.”

“ಈ ವಿಚಾರವನ್ನು ವ್ರಜೇಶರಾಯರಿಗೆಂದಾದರೂ ಹೇಳಿರುವಿರಾ?”

“ಎಷ್ಟೋ ಸಲ ಹೇಳಿರುವೆ. ಅವರೆಷ್ಟಾದರೂ ವಿಜ್ಞಾನದ ಭಕ್ತರು, ಸತ್ಯದ ಆರಾಧಕರು. ಇತಿಹಾಸದಲ್ಲಿ ಜಾತಿಸಂಕರವಾದ ಉದಾಹರಣೆ ಹೇರಳವಾಗಿವೆ, ಬೇರೆ ಧರ್ಮದೊಡನೆ ಬೆರೆಯದ ಧರ್ಮವೊಂದೂ ಇಲ್ಲ. ಅಂದ ಬಳಿಕ ಮಾತನ್ನು ಒಪ್ಪದೇ ಇರಬಹುದೇ? ಅಷ್ಟೇ ಅಲ್ಲ; ಇವನ್ನೆಲ್ಲ ನಮಗೆ ಹೇಳಿದವರು ಅವರೇ ಸರಿ.”

“ಹಾಗಾದರೆ ಅವರು ನಿಮ್ಮನ್ನು ಮನ್ನಿಸಬಹುದೇ?” ಎಂದು ಕಲೆಯು ಕೇಳಿದಳು.

“ನಿಮಗಿಂತಹ ಪ್ರಶ್ನೆ ಕೇಳುವ ಅಧಿಕಾರವಿಲ್ಲ. ಇದನ್ನು ಬೇಕಾದರೆ ನೀವು ಅವರಿಗೇ ಕೇಳಿಕೊಳ್ಳಿರಿ. ಈ ಐದು ವರ್ಷ ಅವರು ನಮ್ಮ ಮನೆಯವರಂತೆಯೇ ಇದ್ದಾರೆ. ನನ್ನ ತಮ್ಮ ಮತ್ತು ತಂಗಿಯರಿಂದಿರಿಗೆ ಕಲಿಸುವುದ

ರಲ್ಲಿ ದಿನಾಲು ತಮ್ಮ ಕೆಲ ವೇಳೆಯನ್ನು ಹಾಳ ಮಾಡಿದ್ದಾರೆ ಅಷ್ಟೇ ಅಲ್ಲ; ಇಂದಿನ ನನ್ನ ಸ್ಥಿತಿಗೂ ಅವರೇ ಕಾರಣರು. ಇಂದಿನ ಸಾಮಾಜಿಕ ರೀತಿ ನೀತಿಗಳು ಮಾನವನ ಶಾರೀರಿಕ, ಆತ್ಮಿಕ ವಿಕಾಸಕ್ಕೆ ತುಂಬ ಬಾಧೆ ತರುವಂಥಹವೆಂದು ಅವರ ಅಭಿಪ್ರಾಯವಿದೆ. "

"ಇಂದಬಳಿಕ ಅವರೊಡನೆ ಕೇಳುವದಾದರೂ ಏನು? ಅವರಂತೂ ನಿನ್ನವರಾದಹಾಗೆಯೇ ಸರಿ. ಆದರೆ ಇಂತಹ ಮೋಸಮಾಡುವುದೇಕೋ ತಿಳಿಯದು. ಬೇರೆಯವರನ್ನು ಅವಮಾನಿಸುವುದರಿಂದ ಅವರಿಗೆ ಬರುವ ಲಾಭವಾದರೂ ಏನ?" ಕಲೆಯ ದನಿ ನಡುಗುತ್ತಿತ್ತು. ಕಣ್ಣೀರು ತೊಟಕಿಸ್ಕುತ್ತಿತ್ತು.

ಉಮೆಯು ಕೂತಲ್ಲಿಯೇ ಕುಳಿತಿದ್ದಳು. ಆಕೆ ಬಾಲೆಯನ್ನು ಉದ್ದೇಶಿಸಿ "ತಾನು ಕಲೆಯೊಡನೆ ವಿವಾಹವಾಗುವದಾಗಿ ವ್ರಜೇಶ ಹೇಳಿಲ್ಲವೆ? ನಿನ್ನೊಡನೆ ಅವರ ತಾಯಿಯಾದರೂ ಈ ಮಾತನ್ನೆತ್ತಲಿಲ್ಲವೆ?"

ತಾಯಿಯ ಮಾತೆತ್ತಿದೊಡನೆಯೇ ವಜ್ರಪಾತವಾದಂತೆನಿಸಿತು. "ವ್ರಜೇಶರಾಯರ ತಾಯಿ ಇಲ್ಲಿಯೇ ಇರುವರೇ? ಅವರ ಲಗ್ನದ ಬಗ್ಗೆ ಮಾತು ನಡೆದುದು ನಿಜವೆ? ನನ್ನೊಡನೆ ಯಾರೊಬ್ಬರೂ ಈ ಸುದ್ದಿಯೆತ್ತಲಿಲ್ಲ. ಆದರೆ ವ್ರಜೇಶರಲ್ಲಿ ಬದಲಾವಣೆಯಾದಂತೆ ನನಗೆ ಕಂಡುಬಂದಿದೆ. ಅವರು ಮೊದಲಿನಂತಿಲ್ಲ. ಅವರ ವಿವಾಹದ ಸುದ್ದಿ ಕಿವಿಗೆ ಬಿದ್ದಿದ್ದರೆ ನಾನಿಲ್ಲಿಯ ತನಕ ಇರುತ್ತಿದ್ದಿಲ್ಲ. ಥೂ, ಇದೆಂತಹ ಲಜ್ಜಾಸ್ಪದ ಘಟನೆ. ನಾನಿಂದೇ ಹೊರಟುಹೋಗುವೆ" ಆಕೆ ಅಳುತ್ತಿದ್ದಳು.

"ಯಾರೊಡನೆಯೂ ಈ ಮಾತನ್ನೆತ್ತಬೇಡಿ. ನೀವು ದಿನಾಲು ಸಾಯಂಕಾಲ ಇಲ್ಲಿ ಆಡ್ಡಾಡಲು ಬರುತ್ತೀರೆಂದು ತಿಳಿದು ನಾವಿಲ್ಲಿಗೆ ಬಂದೆವು. ಆದರೆ ಇಂದಿನ ಭೆಟ್ಟಿಯನ್ನು ಮರೆತುಬಿಡಬೇಕಾಗಿ ಬಿನ್ನವಿಸುತ್ತೇನೆ" ಎಂದು ಉಮೆಯು ಕೇಳಿಕೊಂಡಳು.

"ಆದರೆ ವ್ರಜೇಶನ ತಾಯಿ ಇಲ್ಲಿಯೇ ಇರುವರೆಂಬ ಸುದ್ದಿಯನ್ನು ಹೇಗೆ ಮರೆಯಲಿ? ಇವೆಲ್ಲವುಗಳ ಚರ್ಚೆಯನ್ನು ಮಾತ್ರ ವ್ರಜೆಶರೊಡನೆ ಮಾಡದಿದ್ದಂತೆ ಪ್ರಯತ್ನಿಸುವೆ. ಸಫಲಳಾಗುತ್ತೇನೆಂದು ಹೇಳಲಾರೆ.

ಈಗ ನಿಮ್ಮ ಪತ್ರವನ್ನಷ್ಟು ಕೊಡಿ ಅಂದರೆ ನಿಮ್ಮ ಮನೆಗೆ ಎಂದಾದರೊಮ್ಮೆ ಬರಲು ಅನುಕೂಲವಾದೀತು."

"ತಾವು ಬನ್ನಿ, ನಿಮ್ಮ ಡ್ಯಾರಿಯನ್ನು ಇತ್ತ ತನ್ನಿ, ಪತ್ರ ಬರೆದು ಕೊಡುತ್ತೇನೆ. ಆದರೆ ನೀವು ಈ ವೇಷದಲ್ಲಿ ಬರಲಾರಿರಿ. ಸೀರೆ ಉಟ್ಟು ಬರಬೇಕಾದೀತು."

"ಆದರೆ ನನಗೆ ಅವಶ್ಯಕವೆನಿಸಿದಂತೆಯೇ ವಸ್ತ್ರ ಧರಿಸಲು ನಾನು ಸ್ವತಂತ್ರಳು. ನನ್ನಿಂದಾಗಿಯೇ ವ್ರಜೇಶರಾಯರು ಸೂಟಿನಲ್ಲಿಯೇ ಇರುತ್ತಾರೆ. ನಾನೂ ಈ ಡ್ರೆಸ್ಸನ್ನೇ ಮೆಚ್ಚಿದ್ದೇನೆ"

"ಇದಂತೂ ನಿಮ್ಮ ಸಂಕೋಚ ಪ್ರವೃತ್ತಿಯೆಂದು ನನಗನಿಸುತ್ತಿದೆ. ನಾವಿರುವ ಸಮಾಜವನ್ನು ಬಿಟ್ಟು ನಮಗೆ ಸಿಗುವ ಲಾಭವಾದರೂ ಏನು? ಸಮಾಜದೊಡನೆ ಹೋರಾಡುವುದರಲ್ಲಿಯೇ ನಮ್ಮ ಶಕ್ತಿ ಸರ್ವಸ್ವವೂ ವ್ಯಯವಾದರೆ ದೇಶದ ಸೇವೆ ಮಾಡುವದೆಂತು? ದೇಶದ ಔದ್ಯೋಗಿಕ ಸಂಘಟಣೆಗಾಗಿ, ಜನಹಿತಕ್ಕಾಗಿ ನಾವು ಮಾಡಬೇಕಾದ ಕೆಲಸವೇನೂ ಉಳಿದಿಲ್ಲವೇ?"

"ನಿಮ್ಮ ಲಗ್ನವಾಗಿದೆಯೇ?"

"ಹೌದು, ಆದರಿಂದೇನು?"

"ಅದಕ್ಕಾಗಿಯೇ ನಿಮ್ಮ ಮಾತಿನಲ್ಲಿಂತಹ ಮೃದುತ್ವ ಮನೆಮಾಡಿದೆ. ಕ್ರಾಂತಿಯೆಂದರೆ ಸೇರದು? ವ್ರಜೇಶ, ಕಲಾ ಇವರು ಒಂದೇ ಜಾತಿಯವರೇ?"

"ಅವರಿಬ್ಬರದೂ ಬೇರೆ. ಆದರೆ ವ್ರಜೇಶನ ದೃಷ್ಟಿಯಲ್ಲಿ ನರಮನುಷ್ಯ ಒಂದೆ ಜಾತಿ. ಏನೇ ಇರಲಿ. ನೀವೊಮ್ಮೆ ನಮ್ಮಲ್ಲಿಗೆ ಬನ್ನಿ. ಇದೇ ಡ್ರೆಸ್ಸಿನಿಂದ ಬಂದರೂ ಅಡ್ಡಿಯಿಲ್ಲ"

"ಇಲ್ಲ. ನಾನು ನಿಮ್ಮನ್ನು ಇಲ್ಲಿಯೇ ಕಾಣುವೆ. ನಿಮ್ಮ ಕೃಪೆಯು ಅಪಾರವಾಯಿತು ನಾನು ಹೇಳಿ ಕಳಿಸಿದಾಗ ತಾವು ಕಲೆಯನ್ನೂ ಕರೆದುಕೊಂಡು ದಯವಿಟ್ಟು ಬನ್ನಿ."

“ ಆ ದಿನ ವ್ರಜೇಶರಾಯರನ್ನೂ ಕರೆದುಕೊಂಡು ಬಂದಲ್ಲಿ ಚೆನ್ನಾದೀತು. ”

“ ಬೇಡ, ನಮ್ಮ ವಾಗ್ವಾದ ನೋಡಿ ಜನವೆಲ್ಲ ಹೀನಾಯವಾಗಿ ಕಾಣಬಹುದು ನನ್ನ ಮನಸ್ಸನ್ನು ಬಿಗಿಹಿಡಿಯಲು ಬಲ್ಲೆ. ಎಷ್ಟಾದರೂ ಸೇವಾಸಮಿತಿಯಲ್ಲಿ ನಾನು ಅನೇಕ ವರ್ಷ ಕೆಲಸಮಾಡಿದವಳಿದ್ದೇನೆ. ಹೆಚ್ಚಾಗಿ, ನಾನಿಂದೇ ಲಖನೌಕೆ ಹೋದರೂ ಹೋಗಬಹುದು.”

“ ಹಾಗೆ ಮಾಡಬೇಡಿ ”

ಇರಲಿ Good Bye

“ಉಮೆಯೂ ಹೋಗಿ ಬನ್ನಿ” ಎಂದು ನಮಸ್ಕಾರಮಾಡಿದಳು. ಬಾಲೆಯನ್ನು ಹೆಬ್ಬಾಗಿಲ ವರಗೆ ಕಳಿಸಿ ಬಂದಳು. ಆ ಮೇಲೆ ಕಲೆಯೊಡನೆ “ಕಲಾ, ಬಾಲೆಯು ಒಳ್ಳೇ ಪೇಚಾಟಕ್ಕೆ ಸಿಲುಕಿದಂತೆ ಕಾಣುತ್ತದೆ. ನಮ್ಮಲ್ಲಿಗೆ ಬರಲು ಒಪ್ಪಿದ ಮರುಕ್ಷಣವೇ ‘ಒಲ್ಲೆ, ಲಖನೌಗೆ ಇಂದೇ ಹೋಗುವೆ’ ಎನ್ನತೊಡಗಿದಳು. ವ್ರಜೇಶನಿಗೂ ಬಾಲೆಯನ್ನು, ವರಿಸಿದ್ದೇನೆಂದು ತಾಯಿಯೊಡನೆ ಹೇಳುವ ಧೈರ್ಯವಿಲ್ಲವೆಂದು ಕಾಣುತ್ತಿದೆ. ಆದಕ್ಕಾಗಿಯೇ ತಾಯಿ ಇಲ್ಲಿರುವಳೆಂದೂ ಸಹ ಆಕೆಗೆ ತಿಳಿಸಿರಲಿಕ್ಕಿಲ್ಲ ”

“ ನನ್ನ ವಿವಾಹವಾದಲ್ಲಿ ಬಹಿಷ್ಕಾರ ಹಾಕುತ್ತೇವೆಂದು ಅವರ ತಾಯಿಗೆ ಸಂಬಂಧಿಕರು ಎಚ್ಚರಿಕೆಕೊಟ್ಟು ಹೋಗಿದ್ದಾರಂತೆ. ಅಂದಬಳಿಕ ಬಾಲೆಯ ವಿವಾಹವಾಗುವದೆಂತು? ”

“ ಎಚ್ಚರಿಕೆ ಕೊಟ್ಟ ಸಂಬಂಧಿಕರಿಗೆ ನೀನೆಂದರೂ ಅಷ್ಟೆ, ಬಾಲಿಯೆಂದರೂ ಅಷ್ಟೇ. ಆದರೆ ಅಂತಹ ಜನರೆಲ್ಲ ಹತವೀರ್ಯರಾಗಿದ್ದಾರೆ ಇಂದಿನ ಯುವಕರು ಅಂತಹ ಬೆದರಿಕೆಗಳಿಗೆ ಸೊಪ್ಪುಹಾಕದಷ್ಟು ಬಲಶಾಲಿಗಳಾಗಿದ್ದಾರೆ ಪ್ರಗತಿಶೀಲ ಯುವಕರಿಗೆ ನಿನ್ನಂತೆಯೇ ಬಾಲೆ. ಆಕೆಯೊಡನೆ ವ್ರಜೇಶ ಲಗ್ನವಾಗುವದಾದರೆ ತಾಯಿಯನ್ನು ಬಿಡಬೇಕಾಗುತ್ತದೆ.”

“ ನನಗಂತೂ ಹಾಗೆನಿಸದು. ಹಿಂದಿನವರಿನ್ನೂ ಹತವೀರ್ಯರಾಗಿಲ್ಲವೆಂಬೇ ನನ್ನ ಮತ.”

“ ಇದು ಹಿಂದಿನ ಮಾತಾಯಿತು. ಇಂದು ಹಾಗಿಲ್ಲ.”

"ಇಂತಹ ಪರಿವರ್ತಿತ ತೆರೆಗಳ ತಾಕಲಾಟಕ್ಕೆ ಸಿಕ್ಕು ಸಮಾಜದ ಸಂಘಟನೆಯು ನುಚ್ಚುನೂರಾಗಲಿಕ್ಕಿಲ್ಲವೇ ?"

"ಅಂತಹ ದಿನವೇನೂ ಬಂದಿಲ್ಲ. ಪ್ರತಿಯೊಂದು ದೇಶದಲ್ಲಿಯೂ ಇಂತಹ ದಿನ ಅನೇಕ ಸಲ ಬಂದಿದೆ. ಅಂತಹದನ್ನು ಜನತೆ ಎದುರಿಸಲೇ ಬೇಕಾಗಿದೆ. ಅಂತಹ ದಿನಗಳು ನಮಗೂ ಬರಬಹುದು. ಪರಿವರ್ತನೆಯಿಂದ ಇಂದಿನ ತನಕ ನಡೆದುಬಂದ ಸಂಸ್ಕೃತಿಯೆಲ್ಲ ಮಣ್ಣುಪಾಲಾದೀತೆಂಬ ಭಯ ಬೇಡ. ಕೆಲವು ದಿನಗಳಲ್ಲಿಯೇ ನಮ್ಮ ಸಂಸ್ಕೃತಿಯ ವಿಕಾಸವಾದುದನ್ನು ನೀನು ಕಾಣುವಿ."

"ವಿಕಾಸವಾಗಿಯೇ ತೀರುತ್ತದೆಂದು ನಿಶ್ಚಯವಲ್ಲ, ಎಷ್ಟೋ ದೇಶಗಳ ಇತಿಹಾಸ ಇದಕ್ಕೆ ಸಾಕ್ಷಿಯಾಗಿದೆ."

"ಅದು ಸ್ವಾಭಾವಿಕವೆಂಬುದು ನಿಜ. ನಮ್ಮ ದುರ್ಲಕ್ಷ್ಯದಿಂದ ರೋಗವುಂಟಾಗುತ್ತಿದೆ. ಅದು ಗುಣವಾದ ಮೇಲೆ ನಾವು ರೋಗ ಬರದಂತೆ ಜಾಗರೂಕರಾಗಿರುತ್ತೇವೆ ಇದೂ ಒಂದು ವೈಯಕ್ತಿಕ ಲಾಭವೆಂದೇ ಗಣಿಸಬೇಕಲ್ಲವೇ ?"

"ನನ್ನ ತಾಯಿಗೂ ಈ ವಿವಾಹ ಒಪ್ಪಿಗೆ ಇಲ್ಲವೆಂಬಂತೆ ಕಂಡುಬರ ಹತ್ತಿದೆ. ನಾಲ್ಕಾರು ಹೆಂಗಸರು ಆಕೆಯ ಕಿವಿ ಚುಚ್ಚಿರಬೇಕು."

"ಅಂತಹ ಹಳೆಯ ಹೆಂಗಸರಿಂದ ನಾವು ಇದಕ್ಕೂ ಬೇರೇನು ಆಶಿಸ ಬಹುದು ? ಸಮಯಕ್ಕೆ ತಕ್ಕಂತೆ ವರ್ತಿಸುವುದೇ ಇಂತಹ ರೂಢಿಮೂಢ ಹೆಂಗುಸರಿಗೆ ಬುದ್ಧಿ ಕಲಿಸುವ ಉಪಾಯವಾಗಿದೆ."

"ನಾನು ಈ ವಿಷಯದ ಬಗ್ಗೆ ಇನ್ನೂ ವಿಚಾರಿಸಬೇಕಾಗಿದೆ."

"ವ್ರಜೇಶನ ವಿರುದ್ಧವಾಗಿಯೇ ನೀನು ಆಗಿನಿಂದ ಯೋಚಿಸುತ್ತಿರುವಿ. ಆದರೆ ಹೀಗೆ ಮಾಡಬೇಡ. ನೀನು ಅವನನ್ನು ಮನಸಾ ಮೆಚ್ಚುತ್ತೀಯೆಂದು ಬಲ್ಲೆ."

"ಅವನನ್ನು ನಾನೇಕೆ ಮೆಚ್ಚಲಿ? ಅವನಲ್ಲಾವ ವೈಶಿಷ್ಟ್ಯವಿದೆ? ಅವನ ರೂಪಿಗೋ—ಅವನ ಡಾಕ್ಟರಿಗೋ...."

"ಇವೆಲ್ಲ ನನಗೆ ಗೊತ್ತಿಲ್ಲ. ಆದರೂ ಅವನ ಯಾವುದೋ ಗುಣಕ್ಕೆ ನೀನು ಮಾರುಹೋಗಿದ್ದೀಯೆಂದು ಹೇಳಬಲ್ಲೆ"

" ಇಲ್ಲ—ಎಂದೆಂದಿಗೂ ಇಲ್ಲ."

" ಆದರೂ ಬಾಲೆಯು ಆತನನ್ನು ಪ್ರೀತಿಸುತ್ತಾಳೆಂದು ತಿಳಿದು ನೀನು ಹತ್ತಿರ ನಿಲ್ಲದೆ ಹೋದೆ ಅಲ್ಲವೇ ? "

" ಅವರು ಬೇಕಾದ್ದು ಮಾಡಿಕೊಳ್ಳಲಿ ? ನನಗೇನು ಸಂಬಂಧ ? "

" ನಿನ್ನ ಮನಸ್ಸು ಸರಿಯಾಗಿಲ್ಲ. ಕಲೆಯ ಕಲಾಪೂರ್ಣ ಹೃದಯ ಧಕ್ಕೆಗೊಂಡಿದೆ. ಆದರೆ ವ್ರಜೇಶನನ್ನು ಮಾತ್ರ ಇಷ್ಟಕ್ಕೇ ಬಿಡಲಾರೆ."

" ಇಲ್ಲ, ಇಲ್ಲ, ನೀನೇನೂ ಹಾಗೆ ಮಾಡಬೇಡ."

" ಇರಲಿ ಬಿಡು. ಈಗ ಹೋಗೋಣವಂತೆ."

೬

ಕಲೆಯ ತಂದೆ ಒಂದು ಪತ್ರವನ್ನು ಮೇಲಿಂದ ಮೇಲೆ ಓದಿದ. ಆದರಲ್ಲಿ ಹೀಗೆ ಬರೆದಿತ್ತು.

" ಮಾನ್ಯರೇ,

ಸಾದರ ವಂದನೆ. ನನಗೆ ಲಖನೌವಿಗೆ ಪುನಃ ವರ್ಗವಾಗಿದೆ. ಇಂದೆಯೋ ಅಲ್ಲಿಗೆ ಹೋಗುತ್ತಿದ್ದೇನೆ. ಆದರ ಮಧ್ಯದಲ್ಲಿ ತಮಗೆ ಬೆಟ್ಟಿಯಾಗಲು ಶಕ್ಯವಾಗದುದಕ್ಕಾಗಿ ವಿಷಾದಿಸುತ್ತೇನೆ. ನಿಜವಾಗಿ ಹೇಳುವದಾದರೆ ನನ್ನ ಮನದಲ್ಲೊಂದು ತುಮುಲ ನಡೆದಿದೆ. ಆದರಲ್ಲಿ ಜಯಶೀಲನಾದೊಡನೆಯೋ ತಮ್ಮನ್ನು ಕಾಣುವೆ. ನನ್ನ ಪರಿಸ್ಥಿತಿಯನ್ನು ನೆನಸಿ ಕ್ಷಮಿಸುವಿರೆಂದು ನಂಬಿರುವೆ.

ನಿಮ್ಮವನೇ

**ವ್ರಜೇಶ"**

ಆ ಮೇಲೆ ಹೆಂಡತಿಯನ್ನು ಕರೆದು " ನೋಡೇ, ನನಗಿದೇ ಸಂದೇಹವಿತ್ತು. ಇಂದಿನ ಹುಡುಗರ ಉಲಕೋಚಿತನಕ್ಕೆ ದಿಕ್ಕಿಲ್ಲ. ಅವರಿಗೂ ಮಾನಮರ್ಯಾದೆ ಇಲ್ಲ, ಇತರರ ಮಾನಮರ್ಯಾದೆಯ ಕಾಳಜಿಯೂ ಇಲ್ಲ. ಅವರ ತಂದೆ ಎಲ್ಲರ ಎದುರಿಗೇ ನನ್ನ ಜೊತೆಗೆ ಕೂತು ಉಂಡಿದ್ದ. ಆದರೆ ಈಗ ಮಗನು ಮಾತ್ರ ನನ್ನ ಮಗಳ ಮದುವೆಯಾಗುವದನ್ನು ತಪ್ಪಿಸಲು ನೆವ ಹೇಳಿ ಲಖನೌಗೆ ವರ್ಗ ಮಾಡಿಸಿಕೊಂಡಿರುವ. ಇವನ ಸ್ವಭಾವವು ಈ ರೀತಿ ಕೀಳು ತರಗತಿಯದೆಂದು ಗೊತ್ತಿದ್ದರೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಲು ಬಯಸುತ್ತಿರಲಿಲ್ಲ."

“ ಒಳಗುಟ್ಟು ನೀವೇನು ಬಲ್ಲಿರಿ ? ಅವನ ಉದಾರತೆಗಂತೂ ಸೀಮೆ ಇಲ್ಲ. ಈಗ ಮದುವೆಯಾಗಲಿರುವ ಹುಡುಗಿ ಹಿಂದುವೂ ಅಲ್ಲ. ತಾಯಿಯು ತಾನು ಬದುಕಿದ್ದರಂತೂ ಈ ರೀತಿಯ ವಿವಾಹಕ್ಕೆ ಸಮ್ಮತಿಸುವಂತಿಲ್ಲ; ಆದಕ್ಕಾಗಿಯೇ ಆ ಹುಡುಗಿಯನ್ನು ತನ್ನ ಮನೆಗೂ ತರಲಿಲ್ಲ, ನಮಗೆಲ್ಲ ಗೊತ್ತಾಗಿ ಹೋಗಿದೆ. ”

“ ಆ ಹುಡುಗಿ ಯಾರು ? ”

“ ಅವನೇ ಏನೋ—ಮೇಘಬಾಲಾನೋ ಇತ್ಯಾದಿಯಾಗಿ ಹೆಸರು ಇಟ್ಟಿರುವನಂತೆ ”

“ ಆ, ಅವಳೇ ಏನು ತಡಿತಬಾಲಾ? ಅವಳ ತಂದೆಯಂತೂ ನಾಸ್ತಿಕ ನಾಗಿದ್ದ. ಧರ್ಮದ ಬಗ್ಗೆ ಕೆಟ್ಟ ಪುಸ್ತಕಗಳನ್ನಿಷ್ಟು ಗೀಚಿದ್ದಾನೆ. ಎಂ. ಎ. ದವರಿಗೆ ಆ ಪುಸ್ತಕ ಫಿಲಾಸಫಿಯೆಂದು ಹಚ್ಚಿದ್ದಾರಂತೆ. ಇಂದಿನ ಪಾಶ್ಚಿಮಾತ್ಯ ಸಂಸ್ಕೃತಿ ಇನ್ನೇನೇನು ಮಾಡುತ್ತದೆಯೋ ಯಾರುಬಲ್ಲರು!”

“ ಡಾಕ್ಟರರೆಲ್ಲ ಹೆಚ್ಚಾಗಿ ನಾಸ್ತಿಕರೇ ಇದ್ದಾರೆಂದು ಉಮೆಯು ಹೇಳುತ್ತಿದ್ದಳು. ಉಮೆಯಂತಹ ಆಸ್ತಿಕರು ಇನ್ನಾರೂ ಇಲ್ಲ. ದೇವನೇ ಅದ್ವಿತೀಯ ಸುಂದರ ಕಲಾಕಾರನೆಂದು ಆಕೆಯ ಮತ. ಇಂತಹ ವಿವಾಹಕ್ಕೆ ನಾವೇಕೆ ಈ ಪರಿ ತೊಂದರೆಪಟ್ಟುಕೊಳ್ಳಬೇಕು? ನಮಗಿದ್ದವಳೊಬ್ಬಳೇ ಮಗಳು ವರದಕ್ಷಿಣೆಯೆಂದಲ್ಲ; ಇತರ ರೀತಿಯಿಂದ ಮಗಳ ಹೆಸರಿಗೆ ಜಮೆ ಮಾಡಿದರಾಯಿತು. ”

ಅಶೋಕಕುಮಾರನಿಗೆ ಹೆಂಡತಿಯ ಈ ಮಾತು ಸರಿದೋರಲಿಲ್ಲ. ಸಿಟ್ಟು ಬಂದಿತು. “ ಮದುವೆಯ ಬಗ್ಗೆ ನನ್ನ ನಿಜವಾದ ಅಭಿಪ್ರಾಯವೇನಿದೆ ಯೆಂಬುದನ್ನು ಅರಿತೂ ಈ ರೀತಿ ನುಡಿಯುವಿಯಲ್ಲ! ನನ್ನ ಮಗಳನ್ನು ಮದುವೆಯಾಗಿ ನನ್ನ ಉದ್ಧಾರ ಮಾಡಿದೆನೆಂದು ತಿಳಿಯುವ ತರುಣನೊಡನೆ– ಆದಕ್ಕಾಗಿ ವರದಕ್ಷಿಣೆಯನ್ನು ಕೊಳ್ಳುವವನೊಡನೆ ನಾನು ಹೇಗೆ ಸಂಬಂಧ ಬೆಳೆಸಲಿ? ಇದು ನಮ್ಮೆಲ್ಲರ ಅಪಮಾನ. ಒಂದು ವೇಳೆ ಆತ ಕಷ್ಟದಲ್ಲಿ ಸಿಲುಕಿದನೆಂದರೆ ಮಾತ್ರ ಸಹಾಯಮಾಡುವುದು ನಮ್ಮ ಕರ್ತವ್ಯವಾದೀತು ”

ನಾಲ್ಕಾರು ಕಡೆ ಕಲೆಯ ವಿವಾಹದ ಪ್ರಸ್ತಾಪ ನಡೆದಿತ್ತು. ಅವರ ಲ್ಲೊಬ್ಬ ಎರಡು ಸಾವಿರ, ಇನ್ನೊಬ್ಬ ನಾಲ್ಕು ಸಾವಿರ, ಮಗದೊಬ್ಬ ಹತ್ತು

ಸಾವಿರದ ವರೆಗೆ ವರದಕ್ಷಿಣೆ ಕೇಳಿದ್ದ. ಇಲ್ಲವಾದರೆ ವಿಲಾಯತಿಯಲ್ಲಿ ಕಲಿತು ಬರುವದಕ್ಕೆ ಅನುಕೂಲ ಮಾಡಿಕೊಡಬೇಕೆಂದು ಹಾರೈಸಿದವರೂ ಇದ್ದರು. ಕಲೆಯ ತಾಯಿಗೆ ಇವೆಲ್ಲವುಗಳ ಸ್ಮರಣೆ ಬಂದಿತು.

" ಸಮಾಜದಲ್ಲಿರುವ ರೂಢಿ ಒಳಿತಿರಲಿ, ಕೆಟ್ಟುದೇ ಇರಲಿ. ಒಮ್ಮೆಲೇ ಅದರ ಅತಿಕ್ರಮಣ ಮಾಡಲಾಗುವದಿಲ್ಲ. ಅದರ ಮುಂದೆ ತಲೆಬಾಗದಿದ್ದರೆ ತಲೆ ಒಡೆಯುವ ಸಂಭವವೇ ಹೆಚ್ಚು. ಹುಡುಗಿಯನ್ನು ಹೀಗೆಯೇ ಎಷ್ಟೊಂದು ದಿನ ಮನೆಯಲ್ಲಿಟ್ಟುಕೊಳ್ಳಲಾದೀತು? ಕಂಜೂಷಿ, ಅದನ್ನು ಮುಚ್ಚಿಕೊಳ್ಳಲು ಇಲ್ಲದ ತತ್ವ ಆಡುತ್ತಾನೆಂದು ಜನರಂದುಕೊಂಡಾರು."

" ನನ್ನ ಬಗ್ಗೆ ಕೆಟ್ಟ ಅಭಿಪ್ರಾಯವನ್ನು ಹರಡಬೇಕೆನ್ನುವವರು ಮಾತ್ರ ಈ ರೀತಿ ಅಪಪ್ರಚಾರ ನಡೆಸಬಹುದು."

" ಸಿಗುವ ಪಗಾರೆಷ್ಟು, ತಿನ್ನುವವರೆಷ್ಟು? ಎಂಬುದನ್ನೇ ಜಗತ್ತು ನೋಡುತ್ತಿರುತ್ತದೆ "

" ಹೌದು, ನಿನ್ನ ಜಗತ್ತು ಅಲ್ಲವೇ?"

" ನಿಮ್ಮ ಜಗತ್ತಿನವರ ಮಾತಂತೂ ಇನ್ನಾರಿಗೂ ತಿಳಿಯುವಂತೆಯೇ ಇಲ್ಲ. ಉಳಿದವರೆಲ್ಲ ನಮ್ಮಂತಹ ಜನರ ಮಾತನ್ನೇ ನಂಬುತ್ತಾರೆ."

"ಅವರು ಇನ್ನುಮುಂದೆ ನನ್ನಂತಹನದೇ ಮಾತು ಕೇಳಬೇಕಾದೀತು."

" ಇರಲಿ ಮೊದಲು ಹುಡುಗಿಯ ಲಗ್ನವನ್ನಷ್ಟು ಮಾಡಿರಿ. ಆಮೇಲೆ ಜಗತ್ತಿಗೆ ಬುದ್ಧಿ ಹೇಳಬಹುದಂತೆ."

" ನಾನು ಕೆಲಸದಿಂದಲೇ ಮಾಡಿ ತೋರಿಸುವೆನೇ ಹೊರತು ಮಾತಿನಿಂದಲ್ಲ."

" ಮಾತಾಡುವುದೂ ಒಂದು ಕೆಲಸವೇ—ಅಲ್ಲವೆ ಮತ್ತೆ?"

"ಅಂತೂ ನೀನೂ ತರ್ಕದ ಅಭ್ಯಾಸ ನಡೆಸಿರುವಿಯೆಂದು ಕಾಣುತ್ತಿದೆ."

" ನನ್ನ ವಿಚಾರವೇ ಫಲಿಸಬಹುದು."

" ಫಲಿಸದೇನು ಮಾಡೀತು? ಉಮೆಯನ್ನು ಕರೆದುಕೊಂಡು ವ್ರಜೇಶನ ತಾಯಿಗೆ ಭೆಟ್ಟಿಯಾಗಿರಿ. ವ್ರಜೇಶನು ಬಾಲೆಯನ್ನೇ ಪ್ರೀತಿಸುವದಾದರೆ ತಾಯಿಯನ್ನೂ ಅಲ್ಲಿಗೇ ಕರೆದುಕೊಂಡು ಹೋಗಬಹುದು."

" ನಾನು ಭೆಟ್ಟಿಯಾಗಿ ಹೇಳುವದಾದರೂ ಏನನ್ನು?"

“ ಅದೇ, ನಿನ್ನ ಮಗ ಅನ್ಯಾಯ ಮಾಡುತ್ತಿದ್ದಾನೆ — ಅಧರ್ಮ ಮಾಡುತ್ತಿದ್ದಾನೆ. ”

“ ಬೇರೆ ಜಾತಿಯುವಳೊಡನೆ ಮದುವೆಯಾಗುವದಾದರೂ ಇದೇ ಮಾತು ಬಾರದೇ ? ”

“ ಹೇಗೆ ಹೇಳುವಳು ? ಆ ದಿನವೇ ನಮ್ಮ ಹುಡುಗಿಯನ್ನು ನೋಡಿ ಒಪ್ಪಿ ಹೋಗಿದ್ದಾಳೆ. ಅದನ್ನೆಂತು ಮರೆತು ಬಿಡುವಳು ? ”

“ ಅವಳ ಸಂಬಂಧಿಕರಲ್ಲಿ ಕೆಲವರು ಬಹಿಷ್ಕಾರ ಹಾಕುತ್ತೇವಾಗಿ ಹೇಳಿರುವರಂತೆ ”

“ ಯುವಕರ ಮುಂದೆ ಅವರ ಆಟ ಸಾಗದು. ಬೋರ್ಡಿಂಗಿನಲ್ಲಿ ಅವರೆಲ್ಲ ಒಂದೆಡೆಯಲ್ಲಿಯೇ ಊಟ ಮಾಡಿದವರು. ಇನ್ನು ಮುಂದೆ ಮಾತ್ರ ಹಾಗೆ ಮಾಡಲಾರರೇ ? ನಾವೆಲ್ಲ ಕ್ಷೇತ್ರವನ್ನು ತಯಾರಿಸಿದೆವು. ಅದರಲ್ಲೀಗ ಬೆಳೆ ಬರಹತ್ತಿದೆ. ಯಾರೂ ಅದನ್ನು ತುಳಿದು ಕೆಡಿಸಲಾರರು. ”

‘ ಆದರೆ ನೀವು ಜಾತಿಯನ್ನು ಮುರಿಯಲೆತ್ನಿಸಿದಿರಿ. ಆದರೆ ತರುಣರು ಮತಧರ್ಮವನ್ನೂ ಮುರಿಯಲೆತ್ನಿಸಿದರು. ಅವರಿಗೆ ಕಲೆಯೂ ಅಷ್ಟೇ ! ಬಾಲೆಯೂ ಅಷ್ಟೇ ! ”

“ ಅವೆಲ್ಲ ಯಥಾವಕಾಶ ಸಿದ್ಧಿಸೀತು. ಮೊದಲು ಹಿಂದೂಧರ್ಮದ ಸಂಘಟಣೆ ಅಷ್ಟು ಆಗಲಿ. ”

“ ಆಗಲಿ. ನಾನು ಹೋಗುವೆ. ”

“ ನಿನಗೆ ಯಶಸ್ಸು ಸಿಗಲಿ. ಹೇಗಾದರೂ ಜಾಣ್ಮೆಯಿಂದ ಮದುವೆ ಕೂಡಿ ಬರುವಂತೆ ಮಾಡಿ ಬಾ. ನಾನಿನ್ನೂ ಮಾಡಬೇಕಾದ ಕೆಲಸವಿವೆ ಮೊದಲು ಲಗ್ನ ಆಗಲಿ. ”

“ ಏನದು ? ”

“ ತನ್ನಿಂದ ತಾನೇ ತಿಳಿದೀತು. ”

“ ಅದು ಆಗದಿದ್ದರೆ ಒಳಿತೆಂದು ಕಾಣುತ್ತಿದೆ. ಯುದ್ಧಾಶದ್ಧಾ ಮಾಡಬಹುದು. ”

೭

ಬಾಲೆಯು ಹದಿನಾರು ವರುಷದವಳಿದ್ದಾಗ ವ್ರಜೇಶ ಆಕೆಯನ್ನು ಮೊದಲ ಸಲ ಕಂಡಿದ್ದ. ಅವಳ ತಂದೆ ತೀರಿ ಮೂರು ವರುಷವಾಗಿತ್ತು.

ಕಂದೆ ತೀರಿದ ನಂತರ ಎರಡು ವರುಷದ ವರೆಗೆ ಆಕೆ ಹೇಗಾದರೂ ಅಭ್ಯಾಸ ನಡೆಸಿದಳು ನಂತರ ಸೇವಾಸಮಿತಿಯಲ್ಲೊಂದು ಕೆಲಸ ದೊರಕಿಸಿಕೊಂಡಳು. ಅಲ್ಲಿಯ ಟ್ರೇನಿಂಗ ತೆಗೆದುಕೊಂಡು ಕೆಲಸ ಆರಂಭಿಸಿದಳು ಅಲ್ಲಿ ವ್ರಜೇಶನ ಪರಿಚಯವಾಯಿತು. ಅದನ್ನೆಂದೂ ಆಕೆ ಮರೆಯುವಂತಿರಲಿಲ್ಲ.

ಈ ನಾಲ್ಕು ವರುಷಗಳಿಂದಲೂ ಆಕೆ ವ್ರಜೇಶನನ್ನು ಚೆನ್ನಾಗಿ ಅರಿತಿದ್ದ ರಿಂದ ಹಿಂದುಮುಂದೆ ನೋಡದೆ ತಾರು ಕೊಟ್ಟು ಝಾಂಸಿಗೆ ಬಂದುಬಿಟ್ಟಳು. ಆದರೆ ವ್ರಜೇಶನ ವ್ಯವಹಾರವನ್ನು ಕಂಡು ಆಕೆಗೆ ದುಃಖ, ಆಶ್ಚರ್ಯ ಹಾಗೂ ನಿರಾಶೆಯುಂಟಾಯಿತು. ಪ್ಲ್ಯಾಟ್‌ಫಾರ್ಮಿನ ಮೇಲೆ ಭೆಟ್ಟಿಯಾದಾಗ ವ್ರಜೇಶ "ಇಲ್ಲಿ ನಿನ್ನನ್ನು ಕಂಡು ತುಂಬ ಸಂತೋಷವಾಯಿತು. ಆದರೆ ನನ್ನ ತಾಯಿ ಒಬ್ಬ ಸಂಬಂಧಿಕರಲ್ಲಿ ಹೋಗಿದ್ದಾಳೆ. ಆದಕ್ಕಾಗಿ ಒಳ್ಳೆಯ ಹೊಟೇಲಿನಲ್ಲಿ ನಿನಗಾಗಿ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಬಂದಿರುವೆ."

ಮೂರು ನಾಲ್ಕು ದಿನದ ಹಿಂದೆ ತಾಯಿ ಇಲ್ಲಿ ಸೌಖ್ಯವಾಗಿರುವಳೆಂದು ಬರೆದಿದ್ದ, ಎರಡು ಮೂರು ದಿನದಲ್ಲಿಯೇ ಆಕೆ ಎಲ್ಲಿಯಾದರೂ ಹೋಗ ಬಹುದೆಂಬುದರ ಉಲ್ಲೇಖ ಅದರಲ್ಲಿರಲಿಲ್ಲ ಆದರೂ ಬಾಲೆಯು ಆತನ ಮಾತನ್ನು ನಂಬಿದಳು "ಆಗಲಿ. ಹೊಟೇಲಿನಲ್ಲಿರುವುದು ಅಷ್ಟೇನೂ ಕೆಡುಕಲ್ಲ ನಾನು ಧರ್ಮಶಾಲೆಯಲ್ಲಿ ಸಹ ಇರಬಲ್ಲೆ" ಎಂದು ಉತ್ತರ ವಿತ್ತಿದ್ದಳು.

ಆ ಮೇಲೆ ವ್ರಜೇಶನಲ್ಲಿ ವಿಷಾದದ ಛಾಯೆ ಕಂಡಿದ್ದಳು. ಆದರೆ ಅದರ ಕಾರಣವೇನಿರಬಹುದೆಂಬು ಆಕೆ ಊಹಿಸಿರಲಿಲ್ಲ ಆದರೆ ಉಮೆಯಿಂದ ಎಲ್ಲ ಸಂಗತಿ ತಿಳಿದು ಆಕೆ ತುಂಬ ದುಃಖಿತಳಾದಳು. ಆ ರಾತ್ರಿ ಆಕೆಗೆ ನಿದ್ರೆಯೇ ಹತ್ತಲಿಲ್ಲ. "ಸ್ತ್ರೀಯರ ಬಗ್ಗೆ ಪುರುಷರ ನಡತೆ ಸದಾಕಾಲವೂ ಇದೇ ರೀತಿಯಾಗಿ ಉಳಿದೀತೇ? ನಾನಾಗಲೀ, ಸಾಧು ಪ್ರಾಣಿ ಕಲೆಯಾಗಲೀ ಅವನದೇನನ್ನು ಹಾಳು ಮಾಡಿದ್ದೆವು? ನಾವು ಇದೇ ರೀತಿ ಅವ ರೊಡನೆ ಆಚರಿಸಿದ್ದರೆ ಅವನಿಗೇನನಿಸುತ್ತಿತ್ತು? ಇಂತಹರಿಗೆ ಪ್ರೇಮಿ ಗಳೆಂದರೆ ಪ್ರೇಮದ ಅರ್ಥವನ್ನೇ ಹಾಳು ಮಾಡಿದಂತೆ. ಒಂದೆಡೆಯಲ್ಲಿ ಸ್ಥಿರವಾಗಿರುವುದರಿಂದಲೇ ಮಾನವನ ನೈಸರ್ಗಿಕ ವಿಕಾಸವಾಗಬಲ್ಲುದು.

ಇಂತಹ ಮನುಷ್ಯರೂ-ವ್ರಜೇಶನಂತಹರೂ ಹೀಗಾದ ಬಳಿಕ ಯಾರನ್ನು ನಂಬಲಿ? ಆತನ ಮಾತಿನಲ್ಲಿ-ಶಬ್ದದಲ್ಲಿ-ನುಡಿಯಲ್ಲಿ-ನಡೆಯಲ್ಲಿ-ಎಲ್ಲೆಡೆ ಯಲ್ಲಿಯೂ ಪ್ರೇಮವನ್ನೇ ಕಂಡೆ. ಅವೆಲ್ಲವೂ ಭ್ರಮೆಯಾಯಿತೇ? ಸ್ವಪ್ನವಾಯಿತೇ?"

ಒಂದೊಂದೇ ಘಟನೆಯನ್ನೇ ನೆನಸಿ—ಅದನ್ನೇ ಯೋಚಿಸುತ್ತ ಬೆಳಗು ಮಾಡಿದಳು. ಸುಮಾರು ಎಂಟು ಘಂಟೆಗೆ ವ್ರಜೇಶ ಬಂದು "ಪ್ರಕೃತಿ ನೆಟ್ಟಗಿಲ್ಲವೇ?" ಎಂದು ಕೇಳಿದ.

"ಇಲ್ಲ. ಪ್ರಕೃತಿಯೇನೂ ಕೆಟ್ಟಿಲ್ಲ. ತಮ್ಮ ವಿಷಯವಾಗಿಯೇ ರಾತ್ರಿ ಯೆಲ್ಲ ಯೋಚಿಸುತ್ತಿದ್ದುದರಿಂದ ನಿದ್ದೆ ಬೀಳಲಿಲ್ಲ. ಅದರಿಂದಾಗಿ ಹೀಗಾಗಿರ ಬಹುದು?"

"ಏನದು? ಅದೆಂತಹ ಯೋಚನೆ? ಹಿಂದೆಂದೂ ನೀನು ಹೀಗೆ ಮಾಡಿರಲಿಲ್ಲವಲ್ಲ?"

"ಆ ತಪ್ಪಿಗಾಗಿ ಆಜೀವನವೂ ತೊಂದರೆಪಡಬೇಕಾಗುತ್ತದೆಯೋ ಯಾರುಬಲ್ಲರು? ತಾಯಿ ಇಲ್ಲಿದ್ದರೂ ನೀವು ಇಲ್ಲವೆಂದು ಹೇಳುವ ಅವಶ್ಯಕತೆ ಏನಿತ್ತು?"

"ನಿನಗಾರು ಹೇಳಿದರು?"

"ಹಾಗಾದರೆ ಅವರು ಇಲ್ಲಿ ಇಲ್ಲವೇ?"

"ಇಲ್ಲ."

"ಏನೇ ಇರಲಿ. ನಿಮ್ಮ ಮನೆಯನ್ನಷ್ಟು ತೋರಿಸಿರಿ."

"ನಮ್ಮ ಮನೆಯಲ್ಲಿ ಯಾರೂ ಇಲ್ಲ. ಅಂತಹ ಸ್ಥಿತಿಯಲ್ಲಿ ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರೆ ಜನರೇನಂದಾರು?"

"ಅಲ್ಲಿ ದಾಸ-ದಾಸಿಯರೂ ಇಲ್ಲವೇ? ಇಲ್ಲವಾದರೆ ನೀವು ಹೊರಗೇ ನಿಲ್ಲಿರಿ. ನಾನು ಹೋಗಿ ನೋಡಿ ಬರುವೆ. ನೆರೆಹೊರೆಯ ಒಬ್ಬಿಬ್ಬರನ್ನು ಕರೆದರಾಯಿತು."

"ಹೋಗೋಣ ನಡೆ" ಎಂದು ಸಿಟ್ಟಿನಿಂದ ನುಡಿದ

"ನಿಲ್ಲಿ. ನಿಮ್ಮ ತಾಯಿ ಇಲ್ಲಿಂದ ಹೋಗಿ ಎಷ್ಟು ದಿನವಾಯಿತು?"

"ನಡೆ. ಹಾದಿಯಲ್ಲೆಲ್ಲ ಹೇಳುವೆ"

" ಹೂಂ. "

" ನಿಮ್ಮ ಸಾಮಾನೆಲ್ಲ ತೆಗೆದುಕೊಳ್ಳಿ. ಆಳಿಗೆ ಕರೆಯುತ್ತೇನೆ " ಎಂದು ಹೊಟೆಲ್ಲಿನ ನೌಕರನನ್ನು ಕರೆದನು.

" ಸಾಮಾನನ್ನೇನೂ ತೆಗೆದುಕೊಳ್ಳುವದಿಲ್ಲ. ನಾನೇನೂ ಇಲ್ಲಿರುವದಿಲ್ಲ, ನೋಡಿ ಹಾಗೆಯೇ ಬರುವೆ. "

" ಮನಸ್ಸಿಲ್ಲದಿದ್ದರೆ ಹಾಗೆಯೇ ಬರಬಹುದು. ಆದರೆ ಸಾಮಾನನ್ನೆಲ್ಲ ತೆಗೆದುಕೊಳ್ಳಿ. "

" ನಿಮ್ಮ ಉದ್ದೇಶವಾದರೂ ಏನಿದೆ? ನಿಮ್ಮ ಮನೆಗೆ ಹೋಗಿ ಬಂದ ಮಾತ್ರಕ್ಕೇ ಜನರ ನಗೆಗೆ ಪಕ್ಕಾಗುವೆನೆಂದು ನಿಮ್ಮ ಅಭಿಪ್ರಾಯುವೇ ? "

" ನಿಮಗಿಲ್ಲಿ ಇರುವ ಬಯಕೆ ಇಲ್ಲವಷ್ಟೇ ? "

" ನಿಮ್ಮ ಮನೆ ನೋಡಿಕೊಂಡು ಹಾಗೇ ಸ್ಟೇಶನ್ನಿಗೆ ಹೋಗಬೇಕೆಂದು ನಿಮ್ಮ ಬಯಕೆಯೇ ?—ಆಗಲಿ. ನಿಮ್ಮ ಇಚ್ಛೆಯಂತೆಯೇ ಆಗಲಿ " ಎಂದು ಸಾಮಾನನ್ನೆಲ್ಲ ಗಂಟು ಕಟ್ಟಲು ಸಾವರಿಸಹತ್ತಿದಳು.

ವ್ರಜೇಶ ಸುಮ್ಮನೇ ನೋಡುತ್ತ ನಿಂತಿದ್ದ ಆ ಮೇಲೊಂದು ಚಾದರವನ್ನೆತ್ತಿ ಕೊಟ್ಟ.

" ಬೇಡ, ಬೇಡ, ಸುಮ್ಮನೇ ತ್ರಾಸು ತೆಗೆದುಕೊಳ್ಳಬೇಡಿ ಎಲ್ಲವನ್ನೂ ನಾನೀಗಲೇ ಸರಿಪಡಿಸುವೆ " ಎಂದು ಸಿಟ್ಟಿನಿಂದೆಂದಳು.

ಆಗ ವ್ರಜೇಶ ತಣ್ಣಗಾದ. ಕೆಲ ಹೊತ್ತಿನಲ್ಲಿಯೇ ಬಂದ ಟಾಂಗೆಯ ಮೇಲೆ ಕುಳಿತು ಹೊರಟರು.

" ಎಲ್ಲಿಗೆ ಹೋಗೋದು ರಾಯರೇ ? " ಎಂದು ಟಾಂಗಾವಾಲಾ ಕೇಳಿದ.

" ಹೀಗೆ—ನೆಟ್ಟಗೆ " ಎಂದು ವ್ರಜೇಶ ಕೈ ತೋರಿಸಿದ.

ನಾಲ್ಕು ಹಾದಿ ಕೂಡಿದ್ದಿತು ಅಲ್ಲಿ ಟಾಂಗಾವಾಲಾನು " ಯಾವ ಕಡೆಗೆ ಹೊಡೆಯಲಿ ? " ಎಂದ.

" ನೇರವಾಗಿ "

" ಇದೇನು ಆಸ್ಪತ್ರೆಗೆ ಹೋಗುವ ಮಾರ್ಗವೇ ? " ಎಂದು ಬಾಲೆಯು ಟಾಂಗಾವಾಲಾನಿಗೆ ಕೇಳಿದಳು.

“ ಅಲ್ಲ. ಅದಕ್ಕೆ ಹೋಗುವ ದಾರಿ ಬೇರೆ.”

“ ನಿಲ್ಲಿಸು ” ಎಂದು ವ್ರಜೇಶನೆಂದ.

ಟಾಂಗಾ ನಿಂತಿತು.

“ ನೀವೆಲ್ಲಿಗೆ ತೆಗೆದುಕೊಂಡು ಹೋಗುವಿರಿ ನನ್ನನ್ನ ? ” ಎಂದು ಬಾಲೆಯು ಕೇಳಿದಳು.

“ ಸ್ಟೇಶನ್ನಿಗೆ. ”

“ ಒಳ್ಳೇದು. ನಿಮ್ಮ ಭೆಟ್ಟಿಯಾಗುವ ಮೊದಲು ನಾನೊಬ್ಬ ಸ್ವಯಂ ಸೇವಿಕೆಯಿದ್ದೆನೆಂಬ ಮಾತನ್ನು ನೀವು ಮರೆತಿರಲಿಕ್ಕಿಲ್ಲ. ಇಂದಿನಿಂದ ನಾನು ಮತ್ತೊಮ್ಮೆ ಸೇವಕಿಯೇ ಆಗಿದ್ದೇನೆ. ಅಂತಹ ಸ್ವಯಂಸೇವಿಕೆಯರನ್ನು ನೀವೆಂದೂ ಅವಮಾನ ಮಾಡಲಾರಿರಿ. ತಿಳಿದಿರಲಿ. ನಿಮ್ಮಂತಹ ದೊಡ್ಡ ಮನುಷ್ಯರು ಹೀಗೆ ವರ್ತಿಸುವದು ಒಳಿತಲ್ಲ. ನಾನು ಸ್ಟೇಶನ್ನಿನಿಂದ ತಿರುಗಿ ಬಂದು ಈ ಊರಲ್ಲಿಯೇ ಇನ್ನೊಂದು ವಾರ ವಸ್ತಿ ಮಾಡುವೆ.”

“ಚೆನ್ನಾಯ್ತು”ಎಂದು ಹೇಳಿ ವ್ರಜೇಶ ನಕ್ಕ.

ಈ ನಗೆಯನ್ನು ಕೇಳಿಯಂತೂ ಬಾಲೆಗೆ ಏನೂ ಸೂಚಿಸದಂತಾಯ್ತು.

“ಆದದ್ದೇನು? ವ್ರಜೇಶನಿಷ್ಟು ಪತಿತ ವ್ಯಕ್ತಿಯೇ? ಅಥವಾ ಉಮೇಯೇ ಸುಳ್ಳು ಹೇಳಿರಬಹುದೇ? ಈ ನಗೆ-ಈ ಮುಖಮುದ್ರೆ ಎಲ್ಲ ಸೋಗಿನದೆಂದು ನಂಬಲೇ ? ಇದನ್ನು ನಾನು ಶುದ್ಧ ಸ್ವರೂಪದ ನಗೆಯೆಂದು ಭಾವಿಸುತ್ತ ಬಂದಿದ್ದೇನೆ———ಆದರೆ? ”

ಟಾಂಗೆಯು ಸ್ಟೇಶನ್ನದ ಬಳಿ ಬಂದು ನಿಂತುಬಿಟ್ಟಿತು.

ಟಾಂಗಾವಾಲಾನಿಗೆ ಹಣಕೊಟ್ಟು ತಿಕೀಟು ತೆಗೆದುಕೊಳ್ಳಲು ತಿಕೀಟು ಆಫೀಸಿನ ಬಳಿಹೋದ ಕೆಲಹೊತ್ತಿನಲ್ಲಿಯೇ ವ್ರಜೇಶ ಸೆಕೆಂಡ ಕ್ಲಾಸಿನ ಎರಡು ತಿಕೀಟು ತೆಗೆದು ಕೊಂಡು ಬಂದ

“ಹೋಗೋಣ, ನನಗೆ ಲಖನೌಗೆ ವರ್ಗವಾಗಿದೆ, ತಾಯಿಯನ್ನಾದರೂ ಬಿಡಬಲ್ಲೆ— ಆದರೆ ನಿನ್ನನ್ನು ಬಿಡಲಾರೆ” ವ್ರಜೇಶನೆಂದ ಆತನ ದನಿಯಲ್ಲಿ ನಡುಕವಿತ್ತು.

“ನಾನು ಹೋಗಲಾರೆ ನನಗಂತೂ ಇದೊಂದು ಸಮಸ್ಯೆಯಾಗಿದೆ. ನಿಮ್ಮನ್ನು ನಿಮ್ಮ ತಾಯಿಯಿಂದ ದೂರವಾಗಿರಿಸಲು ನಾನೆಂದಾದರೂ ಬಯಸಬಹುದೇ? ನೀವಾದರೂ ಎಂತಹ ಮಾತಿನ್ನಾಡುತ್ತಿರುವಿರಿ?”

"ಹಾಗಾದರೆ ನಿಮ್ಮನ್ನು ನಿಮ್ಮ ತಾಯಿಯ ಬಳಿ ಮುಟ್ಟಿಸಿ ಬರಲೇ?"

"ಅಂದಬಳಿಕ ವರ್ಗವಾದುದು ಸಟಿಯಲ್ಲವೇ?"

"ಅಲ್ಲ ಇದು ನೋಡು" ಎಂದು ಹುಕುಮನ್ನು ಕಿಸೆಯಿಂದ ಹೊರತೆಗೆದು ತೋರಿಸಿದನು.

"ಇಲ್ಲ ನಾನು ಹೋಗುವದಿಲ್ಲ. ನಿಮ್ಮ ತಾಯನ್ನೊಮ್ಮೆ ಕೋರಿಸಿರಿ" ಎಂದವಳೇ ಒಂದು ಟಾಂಗಾದ ಮೇಲೆಹೋಗಿ ಕುಳಿತಳು.

ಪ್ರಕಾಶನೂ ಹೋಗಿ ಕುಳಿತ, "ನೋಡು, ಇದರಿಂದೇನೂ ಲಾಭವಿಲ್ಲ. ತಾಯಿಯ ಬಗ್ಗೆ ನಾನು ಪಾಲಿಸಬೇಕಾದ ಕರ್ತವ್ಯವನ್ನು ಬಲ್ಲೆ. ಆದರೆ ಆಕೆಯ ಅಂಧ ವಿಶ್ವಾಸಕ್ಕೆ ನನ್ನ ಜೀವನವನ್ನು ಆಹುತಿಗೊಡಲಾರೆ

"ಹಾಗಾದರೆ ತಾಯಿಯ ಸಲುವಾಗಿ ನೀವು ಮಾಡುವ ಕರ್ತವ್ಯ ಪಾಲನೆಯೆಂದರೇನು? ತಾಯಿಯೊಡನೆ ಮಗನು ಇದೇರೀತಿ ವರ್ತಿಸಬಹುದೇ?"

ಬಾಲಾ, ನಿನ್ನಿಂದ ನಾನು ನೀತಿಶಿಕ್ಷಣವನ್ನು ಹೊಂದ ಬೇಕಾದುದಿಲ್ಲ. ತಾಯಿ ಹೇಳಿದುದು ಒಪ್ಪಿದರೂ,ಒಪ್ಪದಿದ್ದರೂ ಪಾಲಿಸಲೇ ಬೇಕೆಂದು ನಿನ್ನ ಆಗ್ರಹವೇ?

"ಮಹಾತ್ಮಾ ತುಲಸೀದಾಸ................"

"ವ್ಹಾ, ತುಲಸೀದಾಸರ ಉಪದೇಶ ಮಾಡಲಿರುವಿಯಾ? ಯಾವಾಗ ಎಂತಹ ಮಾತಾಡ ಬೇಕೆಂಬುದನ್ನೆಲ್ಲ ಮರೆತಂತೆ ತೋರುತ್ತಿದೆ."

"ಇಲ್ಲ, ಮರೆತಿಲ್ಲ, ಯಾವುದಾದರೊಬ್ಬರಲ್ಲಿ ನಾವು ಶ್ರದ್ಧೆ ಇಡುವದಾದರೆ ಎಲ್ಲ ಕೆಲಸಕ್ಕೂ ಸಿದ್ಧರಿರಬೇಕಾಗುತ್ತಿದೆ. ತಾಯಿಯ ಹೊರತು ಇನ್ನಾವ ದೈವವಿದೆ? ನಿಮ್ಮ ತಾಯಿಂದ ನಿಮ್ಮನ್ನು ಹೊರ್ತುಪಡಿಸುವದಾದರೆ ನನ್ನಂತಹ ದುರ್ದೈವಿ ಇನ್ನಾರೂ ಇರಲಾರರು."

"ಬಾಲಾ, ಇದೆಲ್ಲ ಇಂದೇನು ಬಿಚ್ಚಿದೆ? ಈ ಐದು ವರ್ಷಗಳಲ್ಲಿ ಇದರ ಬಗ್ಗೆ ಎಷ್ಟೋಟ್ಟ ವಾದವಿವಾದ ವಾಗಿಲ್ಲವೇ? ಯಾವುದಾದರೊಂದು ತತ್ವಕ್ಕಾಗಿ ನಮ್ಮ ಜೀವನವನ್ನು ಮುಡಿಪಾಗಿಡಬೇಕೆ ಹೊರತಾಗಿ–"

"ಅಹುದು ಅದೇ ತತ್ವ, ತಾಯಿಸೇವೆಯೇ ಪರಮಕರ್ತವ್ಯ, ಆದರ್ಶ, ಅದಕ್ಕಾಗಿ ಎಲ್ಲವನ್ನೂ ಹೋಮಿಸಲು ಸಿದ್ಧವಾಪಬೇಕು."

ನಿನ್ನ ತಾಯಿ ನನ್ನೊಡನೆಯೇ ನಿನ್ನ ಲಗ್ನ ಮಾಡಬೇಕೆಂದು ಹಟಹಿಡಿದರೆ?"

"ತಾಯಿ ಒಪ್ಪಿದರೂ-ನಿಮ್ಮ ತಾಯಿಯನ್ನು ಒಪ್ಪಿಸಿಯೇ ಲಗ್ನವಾಗುವೆ."

"ಇದು ಶಕ್ಯವಾಗದಿದ್ದರೆ?"

"ಲಗ್ನ ವಾಗುವದೂ ಅಶಕ್ಯವೇ ಆದೀತು"

"ಒಳ್ಳೇದು. ಹಾಗಾದರೆ ನಿಮ್ಮನ್ನು ಲಖನೌಕ್ಕೇ ತಲುಪಿಸಿ ಬರುವೆ."

"ಇಲ್ಲ, ನಾನು ನಿಮ್ಮ ತಾಯಿಯನ್ನು ಕಂಡೇ ಬರುವೆ"

"ಬಾಲಾ, ಹಿಂದುಸ್ಥಾನದಲ್ಲಿರುವವರೆಲ್ಲ ಒಂದುಗಳೆಂದೇ ನಾನು ಭಾವಿಸಿರುವೆ ನಿನಗೆ ತಾಯಿಯ ಅಭಿಪ್ರಾಯ......."

"ಇದನ್ನು ಬಲ್ಲೆ, ಆದರೆ ನನಗೆ ನಿಮ್ಮ ಅಭಿಪ್ರಾಯ ಬೇಕಿಲ್ಲ. ಇಲ್ಲಿಯ ಜನರ ಸಂಸ್ಕೃತಿ ಯಾವುದಿದೆಯೋ-ಯಾವರೀತಿಯಿಂದ ಅವರ ದೃಷ್ಟಿ ಸಮನ್ವಯದತ್ತ ತೆರಳಿದೆಯೋ, ಸತ್ಯ ಅಹಿಂಸೆಗಳ ಮೂಲಕ ನಾವು ಯಾವುದನ್ನು ಸಾಧಿಸ ಬೇಕಾಗಿದೆಯೋ ಅದೇ ನಮ್ಮ ಧರ್ಮವಾದೀತು"

"ನಿನ್ನೊಡನೆ ಮದುವೆಯಾಗಿ ಸಾಧಿಸಬೇಕೆಂದಿರುವದೂ ಇದನ್ನೇ"

"ನನ್ನೊಡನೆ ಮದುವೆಯಾಗಿಯೇ ಇದನ್ನು ಸಾಧಿಸಬೇಕೆಂದಿಲ್ಲ, ಹಾಗೆಯೂ ಮಾಡಬಹುದು"

"ನಿನ್ನ ವಿಸಂಗತ ವಿಚಾರ ನಿನಗೇ ತಿಳಿಯದಾಗಿದೆ. ನಮ್ಮ ದುರ್ಗತಿಗೆ ಇಂತಹ ಅಪಕ್ವ ವಿಚಾರಗಳೇ ಕಾರಣ ನನ್ನ ತಾಯಿ ನಿನ್ನ ಜಾತಿಯ ಧರ್ಮವನ್ನು ಎಂದಿಗೂ ಒಪ್ಪಲಾರಳು"

"ಹೀಗೆ ಆಗಲಾರದೇ? ಅವಳಿರುವಲ್ಲಿ ನನ್ನನ್ನೊಮ್ಮೆ ತೆಗೆದುಕೊಂಡಾದರೂ ಹೋಗಿರಿ"

"ನಾನೇನೂ ಬರಲಾರೆ, ಬೇಕಾದರೆ ನೀನೊಬ್ಬಳೇ ಹೋಗು ನಾನಲ್ಲಿಯೇ ಕುಳಿತು ಪತ್ರ ಬರೆಯುವೆ"ಎಂದು ಟಾಂಗಾದಿಂದ ಪ್ರವೇಶನಿಳಿದ ಮತ್ತು ಟಾಂಗಾದವನಿಗೆ "ಇವಳನ್ನು ಸರಕಾರೀ ಡಾಕ್ಟರರಿದ್ದಲ್ಲಿ ತಲುಪಿಸು. ಕೆಲಹೊತ್ತಿನಲ್ಲಿಯೇ ತಿರುಗಿ ಬರುವಂತಿದ್ದರೆ ಕರೆದುಕೊಂಡು ಬಾ"ಎಂದ. ಟಾಂಗೆ ಹೊರಟಿತು.

ಒಬ್ಬರನ್ನೊಬ್ಬರು ನೋಡಿದರು. ಆದರೆ ಯಾರ ಬಾಯಿಂದಲೂ ಮಾತು ಹೊರಡಲಿಲ್ಲ—ಮಾತಾಡುವದೂ ಶಕ್ಯವಿರಲಿಲ್ಲ.

೮

ದಾರಿಯಲ್ಲಿ ಟಾಂಗಾದವನಿಗೆ ಬಾಲೆಯು "ನಾನು ಮೊದಲು ಅಂಗಡಿಗೆ ಹೋಗುವೆ ಒಂದೆರಡು ವಸ್ತ್ರ ಕೊಳ್ಳುವದಿದೆ" ಎಂದಳು.

ಟಾಂಗಾದವ ಜವಳಿ ಅಂಗಡಿಯ ಮುಂದೆ ತಂದು ನಿಲ್ಲಿಸಿದಾಗಲೂ ಆಕೆ ತುಸು ಯೋಚಿಸುತ್ತಲೇ ಕುಳಿತಿದ್ದಳು. ಆ ನೇಲೆ ಅಲ್ಲಿಂದೆದ್ದು ಒಂದು ಜವಳಿ ಅಂಗಡಿಗೆ ಹೋಗಿ ಎರಡು ಬನಾರಸೀ ಸೀರೆಗಳನ್ನು ಕೊಂಡು ಕೊಂಡಳು, ಹಾಗೇ ಬಂದು ಟಾಂಗಾದವನಿಗೆ ಮೊದಲು ಇಳಿದುಕೊಂಡಿದ್ದ ಹೊಟೇಲಿಗೆ ಹೋಗಲು ತಿಳಿಸಿದಳು.

ಟಾಂಗಾದಲ್ಲಿ ಬಾಲೆಯು ತಿರುಗಿ ಬಂದುದನ್ನು ಕಂಡು ಅದರ ಮಾಲಕನಿಗೆ ಆಶ್ಚರ್ಯವಾಯಿತು.

"ನಾನಿನ್ನೂ ಎರಡುದಿನ ಇರಬೇಕಾಗಿದೆ. ಆ ಕೋಣೆ ಹಾಗೆಯೇ ಖಾಲೀ ಇರುವದಷ್ಟೇ"

"ಹೌದು-ನೀವು ಸಂತೋಷವಾಗಿ ಇದ್ದುಕೊಳ್ಳಬಹುದು."

ಕೆಲಹೊತ್ತಿನಲ್ಲಿಯೇ ಆಕೆ ಸೀರೆಯುಟ್ಟು ಟಾಂಗಾದಲ್ಲಿ ಬಂದು ಕುಳಿತಳು, ನೇರವಾಗಿ ಡಾಕ್ಟರನ ಮನೆಯ ಮುಂದೆ ಬಂದು ನಿಂತಿತು, ಅದೇ ಹೊತ್ತಿಗೆ ಕಲಾ ಹಾಗೂ ಉಮಾ ಇವರಿಬ್ಬರೂ ಟಾಂಗಾದ ಮೇಲೆ ಅಲ್ಲಿಗೇ ಬಂದುಮುಟ್ಟಿದರು.

ಸುಮಾರು ಅರ್ಧತಾಸಿನವರೆಗೆ ಅವರಲ್ಲಿ ಹೊರಗಿನ ಹೊಸ್ತಿಲಲ್ಲಿಯೇ ಮಾತುಕತೆ ನಡೆಯಿತು. ಆ ಮೇಲೆ ಹೊಟೇಲಿನ ಮಾರ್ಗವಾಗಿ ಸ್ಟೇಶನ್ನಿಗೆ ಬಂದಳು. ಉಮೆ ಹಾಗೂ ಕಲಾ ಇವರಿಬ್ಬರೂ ಸಂತೋಷಪಟ್ಟರು.

ಸ್ಟೇಶನ್ನಿಗೆ ಬಂದು ವ್ರಜೇಶ ನೊಡನೆ "ನಾನು ತಾಯಿಯ ಭೆಟ್ಟಿಯಾಗಲಿಲ್ಲ. ಆದರೆ ಉಮೆ ಹಾಗೂ ಕಲಾಳ ಭೆಟ್ಟಿಯಾಗಿ ಬಂದೆ. ಇನ್ನು ಮುಂದೆ ಡಾಕ್ಟರಿಯನ್ನು ಬಿಟ್ಟು ಸೇವಾಸಂಘದಲ್ಲಿ ಸೇರಬೇಕೆಂದು ಮಾಡಿರುವೆ."

"ಯಾಕೆ ?"

"ಡಿಗ್ರಿಪಡೆದ ಡಾಕ್ಟರರಿಗಿಂತ ನಿಜವಾದ ಸೇವಕರ ಆವಶ್ಯಕತೆ ಇಂದು ಹೆಚ್ಚಾಗಿದೆ ಅಲ್ಲದೆ ಡಿಗ್ರಿಪಡೆದವರ ಸಂಖ್ಯೆಯೂ ಸಾಕಷ್ಟಿದೆ"

"ಇದೇನು ಬಾಲಾ, ಒಮ್ಮೊಮ್ಮೆ ನೀನು ಮಕ್ಕಳಂತೆ ಮಾತಾಡಹತ್ತುವಿಯಲ್ಲ! ಜೀವನದಲ್ಲಿ ಆದರ್ಶ ಸಿದ್ಧಿಸುವ ಬಗ್ಗೆ ನಾವಿಬ್ಬರೂ ಕೂಡಿ ಅಷ್ಟು ಯೋಚಿಸಿಲ್ಲ? ಆಗ ಅವನ್ನೆಲ್ಲ ಒಪ್ಪಿದ ನೀನು ಹೀಗೇಕೆ ಶಂಕಿಸುವೆ?"

"ನಾನು ಸಿದ್ಧಾರ್ಥರ [illegible] ಕೊಂಡಂತೆಯೇ ನಡೆ[illegible]ವೆ"

"ಒಳ್ಳೇದು. ತಮ್ಮನಿ[illegible] ಬಿ[illegible]ರಾ?"

"ಹೌದು! ಎಂಟ್ರೆನ್ಸ ಪಾಸಾದೊಡನೆಯೇ ವಿಮಾನ ಶಿಕ್ಷಣಕ್ಕೆ ಕಳಿಸಲಿರುವೆ"

"ಆಹಾ! ಆ ಮೇಲೇನು? ಆತ ಇಡೀ ಜಗತ್ತನ್ನೆಲ್ಲ ವಿಮಾನದಲ್ಲಿ ಕುಳಿತು ತೋರಿಸುತ್ತಿರ ಬಹುದಲ್ಲವೇ?"

"ಹೌದು, ಇದೇನು ಅಸಂಭವವಲ್ಲ! ಇಷ್ಟೇಅಲ್ಲ; ಇಲ್ಲಿಯೇ ವಿಮಾನು ಕಟ್ಟುವ ಕಾರಖಾನೆಗಳಾದರೂ ಆಗಬಹುದು. ಎಂಬತ್ತು ವರ್ಷದ ಹಿಂದೆ ನಮಗಿಂತಲೂ ಅನಾಗರಿಕರಾದ ಜಪಾನಿಯರು ಇಂದು ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಬೆರಳು ಕಚ್ಚುವಂತೆ ಮಾಡಿಲ್ಲವೇ? ನಾವೆಲ್ಲ ಹಿಂದು ಮುಸಲ್ಮಾನರೆಲ್ಲ ಒಂದಾಗಿದ್ದರೆ ನಾವೂ ಅಂತಹದೊಂದು ರಾಷ್ಟ್ರವನ್ನು ಕಟ್ಟ ಬಹುದಿತ್ತು. ನಮ್ಮಂತಹ ವಿಶಾಲ ದೇಶದೆದುರು ಎಲ್ಲರೂ ತಲೆಬಾಗ ಬೇಕಿತ್ತು"

"ಆಗದ ಹೋಗದ ಸಂಗತಿಯನ್ನು ನೆನಸಿ ಮಿಡುಕುವದೇಕೆ? ಅವರ ಬಗ್ಗೆ ಯೋಚಿಸುವದೆಂದರೆ ಗಾಳಿಗೋಪುರ ಕಟ್ಟಿದಂತೆ"

"ನಮ್ಮಿಂದ ತಪ್ಪಿಹೋದುದನ್ನು ಕುರಿತು ನಾವು ಯೋಚಿಸಲೇಬೇಕು. ನಾವೆಲ್ಲಿ ತಪ್ಪಿದ್ದೇವೆಂದು ತಿಳಿದುಕೊಂಡು ಸುಧಾರಿಸಿಕೊಳ್ಳುವದು ನಮ್ಮ ಕರ್ತವ್ಯ. ಬೆಳಕು ಎಲ್ಲಿಂದ ಬಂದರೂ ತೆಗೆದುಕೊಳ್ಳಬೇಕು"

"ಓಹೋ, ಉಮೆಯ ಗಂಡನನ್ನು ನೀನು ಭೆಟ್ಟಿಯಾಗಿ ಬಂದೆಯಾ?"

"ಇಲ್ಲ. ಅವರ ಭೆಟ್ಟಿಯಾದರೆ ಏನಾಗುತ್ತಿತ್ತು?"

"ಅವರೊಂದು ರಾಷ್ಟ್ರೀಯ ಪತ್ರಿಕೆಯ ಸಂಪಾದಕರಿದ್ದಾರೆ. ಅಲ್ಲಿ ಯಾವಾಗಲೂ ಉತ್ಸಾಹದ ವಾತಾವರಣ ಇದ್ದೇ ಇರುತ್ತದೆ. ಸಣ್ಣ ಸಣ್ಣ ಕಾರ್ಯಕರ್ತರ ಹಸಿವಿಗೆ ಅನ್ನ ದೊರೆಯುತ್ತಿದೆ. ನಾನೂ ಎರಡು ಸಲ ಅಲ್ಲಿಗೆ ಹೋಗಿದ್ದೆ."

ಒಬ್ಬರನ್ನೊಬ್ಬರು ನೋಡಿದರು. ಆದರೆ ಯಾರ ಬಾಯಿಂದಲೂ ಮಾತು ಹೊರಡಲಿಲ್ಲ—ಮಾತಾಡುವದೂ ಶಕ್ಯವಿರಲಿಲ್ಲ.

೮

ದಾರಿಯಲ್ಲಿ ಟಾಂಗಾದವನಿಗೆ ಬಾಲೆಯು "ನಾನು ಮೊದಲು ಅಂಗಡಿಗೆ ಹೋಗುವೆ ಒಂದೆರಡು ವಸ್ತ್ರಕೊಳ್ಳುವದಿದೆ" ಎಂದಳು.

ಟಾಂಗಾದವ ಜವಳಿ ಅಂಗಡಿಯ ಮುಂದೆ ತಂದು ನಿಲ್ಲಿಸಿದಾಗಲೂ ಆಕೆ ತುಸು ಯೋಚಿಸುತ್ತಲೇ ಕುಳಿತಿದ್ದಳು. ಆ ಮೇಲೆ ಅಲ್ಲಿಂದೆದ್ದು ಒಂದು ಜವಳಿ ಅಂಗಡಿಗೆ ಹೋಗಿ ಎರಡು ಬನಾರಸೀ ಸೀರೆಗಳನ್ನು ಕೊಂಡು ಕೊಂಡಳು, ಹಾಗೇ ಬಂದು ಟಾಂಗಾದವನಿಗೆ ಮೊದಲು ಇಳಿದುಕೊಂಡಿದ್ದ ಹೊಟೇಲಿಗೆ ಹೋಗಲು ತಿಳಿಸಿದಳು.

ಟಾಂಗಾದಲ್ಲಿ ಬಾಲೆಯು ತಿರುಗಿ ಬಂದುದನ್ನು ಕಂಡು ಅದರ ಮಾಲಕನಿಗೆ ಆಶ್ಚರ್ಯವಾಯಿತು.

"ನಾನಿನ್ನೂ ಎರಡುದಿನ ಇರಬೇಕಾಗಿದೆ. ಆ ಕೋಣೆ ಹಾಗೆಯೇ ಖಾಲೀ ಇರುವದಷ್ಟೇ"

"ಹೌದು-ನೀವು ಸಂತೋಷವಾಗಿ ಇದ್ದುಕೊಳ್ಳಬಹುದು. "

ಕೆಲಹೊತ್ತಿನಲ್ಲಿಯೇ ಆಕೆ ಸೀರೆಯುಟ್ಟು ಟಾಂಗಾದಲ್ಲಿ ಬಂದು ಕುಳಿತಳು, ನೇರವಾಗಿ ಡಾಕ್ಟರನ ಮನೆಯ ಮುಂದೆ ಬಂದು ನಿಂತಿತು, ಅದೇ ಹೊತ್ತಿಗೆ ಕಲಾ ಹಾಗೂ ಉಮಾ ಇವರಿಬ್ಬರೂ ಟಾಂಗಾದ ಮೇಲೆ ಅಲ್ಲಿಗೇ ಬಂದುಮುಟ್ಟಿದರು.

ಸುಮಾರು ಅರ್ಧತಾಸಿನವರೆಗೆ ಅವರಲ್ಲಿ ಹೊರಗಿನ ಹೊಸ್ತಿಲಲ್ಲಿಯೇ ಮಾತುಕತೆ ನಡೆಯಿತು. ಆ ಮೇಲೆ ಹೊಟೇಲಿನ ಮಾರ್ಗವಾಗಿ ಸ್ಟೇಶನ್ನಿಗೆ ಬಂದಳು. ಉಮೆ ಹಾಗೂ ಕಲಾ ಇವರಿಬ್ಬರೂ ಸಂತೋಷಪಟ್ಟರು.

ಸ್ಟೇಶನ್ನಿಗೆ ಬಂದು ವ್ರಜೇಶ ನೊಡನೆ " ನಾನು ತಾಯಿಯ ಭೆಟ್ಟಿಯಾಗಲಿಲ್ಲ. ಆದರೆ ಉಮೆ ಹಾಗೂ ಕಲಾಳ ಭೆಟ್ಟಿಯಾಗಿ ಬಂದೆ. ಇನ್ನು ಮುಂದೆ ಡಾಕ್ಟರಿಯನ್ನು ಬಿಟ್ಟು ಸೇವಾಸಂಘದಲ್ಲಿ ಸೇರಬೇಕೆಂದು ಮಾಡಿರುವೆ. "

" ಯಾಕೆ ?"

"ಡಿಗ್ರಿಪಡೆದ ಡಾಕ್ಟರರಿಗಿಂತ ನಿಜವಾದ ಸೇವಕರ ಆವಶ್ಯಕತೆ ಇಂದು ಹೆಚ್ಚಾಗಿದೆ ಅಲ್ಲದೆ ಡಿಗ್ರಿ ಪಡೆದವರ ಸಂಖ್ಯೆಯೂ ಸಾಕಷ್ಟಿದೆ"

"ಇದೇನು ಬಾಲಾ, ಒಮ್ಮೊಮ್ಮೆ ನೀನು ಮಕ್ಕಳಂತೆ ಮಾತಾಡಹತ್ತುವಿಯಲ್ಲ! ಜೀವನದಲ್ಲಿ ಆದರ್ಶ ಸಿದ್ಧಿಸುವ ಬಗ್ಗೆ ನಾವಿಬ್ಬರೂ ಕೂಡಿ ಇದನ್ನು ಯೋಚಿಸಿಲ್ಲ? ಆಗ ಅವನ್ನೆಲ್ಲ ಒಪ್ಪಿದ ನೀನು ಹೀಗೇಕೆ ಶಂಕಿಸುವೆ?"

"ನಾನು ನಿರ್ಧಾರ ಮಾಡಿಕೊಂಡಂತೆಯೇ ನಡೆಯುವೆ"

"ಒಳ್ಳೇದು. ತಮ್ಮನಿಗೂ ನಿನ್ನ ಮನಸ್ಸು ಬಿಚ್ಚಿಟ್ಟಿರುವೆಯಾ?"

"ಹೌದು! ಎಂಟ್ರೆನ್ಸ ಪಾಸಾದೊಡನೆಯೇ ವಿಮಾನ ಶಿಕ್ಷಣಕ್ಕೆ ಕಳಿಸಲಿರುವೆ"

"ಆಹಾ! ಆ ಮೇಲೇನು? ಆತ ಇಡೀ ಜಗತ್ತನ್ನೆಲ್ಲ ವಿಮಾನದಲ್ಲಿ ಕುಳಿತು ತೋರಿಸುತ್ತಿರಬಹುದಲ್ಲವೇ?"

"ಹೌದು, ಇದೇನು ಅಸಂಭವವಲ್ಲ! ಇಷ್ಟೇ ಅಲ್ಲ; ಇಲ್ಲಿಯೇ ವಿಮಾನು ಕಟ್ಟುವ ಕಾರಖಾನೆಗಳಾದರೂ ಆಗಬಹುದು. ಎಂಬತ್ತು ವರ್ಷದ ಹಿಂದೆ ನಮಗಿಂತಲೂ ಅನಾಗರಿಕರಾದ ಜಪಾನಿಯರು ಇಂದು ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಬೆರಳು ಕಚ್ಚುವಂತೆ ಮಾಡಿಲ್ಲವೇ? ನಾವೆಲ್ಲ ಹಿಂದು ಮುಸಲ್ಮಾನರೆಲ್ಲ ಒಂದಾಗಿದ್ದರೆ ನಾವೂ ಅಂತಹದೊಂದು ರಾಷ್ಟ್ರವನ್ನು ಕಟ್ಟಬಹುದಿತ್ತು. ನಮ್ಮಂತಹ ವಿಶಾಲ ದೇಶದೆದುರು ಎಲ್ಲರೂ ತಲೆಬಾಗಬೇಕಿತ್ತು"

"ಆಗದ ಹೋಗದ ಸಂಗತಿಯನ್ನು ನೆನಸಿ ಮಿಡುಕುವದೇಕೆ? ಅದರ ಬಗ್ಗೆ ಯೋಚಿಸುವದೆಂದರೆ ಗಾಳಿಗೋಪುರ ಕಟ್ಟಿದಂತೆ"

"ನಮ್ಮಿಂದ ತಪ್ಪಿಹೋದುದನ್ನು ಕುರಿತು ನಾವು ಯೋಚಿಸಲೇಬೇಕು. ನಾವೆಲ್ಲಿ ತಪ್ಪಿದ್ದೇವೆಂದು ತಿಳಿದುಕೊಂಡು ಸುಧಾರಿಸಿಕೊಳ್ಳುವದು ನಮ್ಮ ಕರ್ತವ್ಯ. ಬೆಳಕು ಎಲ್ಲಿಂದ ಬಂದರೂ ತೆಗೆದುಕೊಳ್ಳಬೇಕು"

"ಓಹೋ, ಉಮೆಯ ಗಂಡನನ್ನು ನೀನು ಭೆಟ್ಟಿಯಾಗಿ ಬಂದೆಯಾ?"

"ಇಲ್ಲ. ಅವರ ಭೆಟ್ಟಿಯಾದರೆ ಏನಾಗುತ್ತಿತ್ತು?"

"ಅವರೊಂದು ರಾಷ್ಟ್ರೀಯ ಪತ್ರಿಕೆಯ ಸಂಪಾದಕರಿದ್ದಾರೆ. ಅಲ್ಲಿ ಯಾವಾಗಲೂ ಉತ್ಸಾಹದ ವಾತಾವರಣ ಇದ್ದೇ ಇರುತ್ತದೆ. ಸಣ್ಣ ಸಣ್ಣ ಕಾರ್ಯಕರ್ತರ ಹಸಿವಿಗೆ ಅನ್ನ ದೊರೆಯುತ್ತಿದೆ. ನಾನೂ ಎರಡು ಸಲ ಅಲ್ಲಿಗೆ ಹೋಗಿದ್ದೆ."

"ನೀವು ಅಲ್ಲಿ ಹೋದುದೇಕೆ ?"

"ಹೀಗೆಯೇ ? ಮಜಾನೋಡಲಿಕ್ಕೆ"

"ನಿಮಗೆ ಮೋಜು, ಹುಚ್ಚು ಎನಿಸುತ್ತಿರುವುದೇ ? ನಮ್ಮೆಲ್ಲರಿಗೆ ಸತ್ಯವಾಗಿದೆ ಅದು. ಜೀವನವಾಗಿದೆ. ದಾರಿತೋರುವ ದೀಪವಾಗಿದೆ"

"ಇದೆಲ್ಲ ಎಲ್ಲಿಂದ ಕಲಿತು ಬಂದೆ, ಬಾಲಾ"

"ಇದೇನು ? ಇಂತಹ ಮಾತನ್ನು ಹಿಂದೆಂದೂ ಕೇಳಿರಲಿಲ್ಲವೇ ?"

"ಇಲ್ಲ ನಿನ್ನ ಮಾತಿನಲ್ಲಿರುವ ಶಕ್ತಿಯನ್ನು ನಾನೆಂದೂ ಅರಿತಿರಲಿಲ್ಲ. ಅದು ಇಂದೇ ಕಂಡು ಬಂದಿತು"

"ಆಹುದು ಹಾಗೆ ಅದುದೇನೋ ನಿಜ."

"ಕಲೆಯೊಡನೆ ನನ್ನ ವಿವಾಹವಾಗಬೇಕೆಂದು ಉಮೆಯ ಬಯಕೆ ಇದೆ. ಅದಕ್ಕಾಗಿಯೇ ಉಮೆಯು ನಿಮಗಿಂತಹ ಬೋಧೆ ಮಾಡುತ್ತಿರಬೇಕು"

"ನಾನೂ ಸಹ ಅದನ್ನೇ ಯೋಚಿಸುತ್ತಿದ್ದೇನೆ."

"ಒಳ್ಳೇದು ಎರಡನೇ ಗಾಡಿಗೆ ಹೋಗೋಣವಂತೆ ನಿಲ್ದಾಣದಲ್ಲಿ ಕೂಡ್ರೋಣ"

"ನೀವು ತಾಯಿಯನ್ನೇಕೆ ಸಂಗಡ ಕರೆದುಕೊಂಡು ಬರಬಾರದು ?"

"ನಾನು ನಿನ್ನ ಜೊತೆಗೆ ಲಖನೌಕ್ಕೆ ಹೋಗುವ ಸುದ್ದಿಯನ್ನು ತಾಯಿ ಅರಿಯಳು. ಅವಳಿಗೊಮ್ಮೆ ಹೇಳಿಬರುತ್ತೇನೆ."

"ಅಭಿನಂದನೆಗಳು"

"ಬಾಲಾ, ನನಗಿಂತ ನೀನೇ ಅಭಿನಂದನಾರ್ಹಳು"

೬

ಸೇವಾಸಮಿತಿಯಲ್ಲಿ ಐದುವರ್ಷಗಳ ನಂತರ ಬಾಲೆಯನ್ನು ಪುನಃ ಕಂಡರು. ಹಿಂದಿನ ಪರಿಚಯದವರೆಲ್ಲ ಒಂದೆಡೆ ಕೂಡಿದರು ಅಷ್ಟೇ ಅಲ್ಲ, ಸಂಘದ ಕಾರ್ಯದರ್ಶಿಯೂ ಸಹ ಯಾವುದೋ ನೆವದಿಂದ ಅಲ್ಲಿಗೆ ಬಂದ. ಬಂದವನೇ ಗಾರ್ಕಿಯ ಪ್ರಸಿದ್ಧ ಕತೆಯಾದ ೨೬ ಮತ್ತು ೧ ನ್ನು ಓದಿರುವಿರಾ, ಅದರ ನಾಯಕಿಯ ಪತನವಾಗುತ್ತಿದೆ. ಆದರೆ ಇಲ್ಲಿಯ ನಾಯಕಿಯ ಉದ್ಧಾರವಾಗಿದೆ. ಅಂತರವು ಇದೇ ಅಲ್ಲವೇ ?" ಎಂದ.

ಎಲ್ಲರೂ ನಕ್ಕರು ಇದು ವ್ಯಂಗ್ಯವಾಗಿದ್ದಿತು. ಯಾಕಂದರೆ ಇಬ್ಬರದೂ ಪತಸನೇ ಆದದ್ದಿದೆ. ಅಷ್ಟರಲ್ಲಿಯೇ ವೇಗದಿಂದೊಬ್ಬ ತರುಣನು ಬಂದು 'ನೀವು ಇಲ್ಲಿ ಬಂದಿರಾ?'ಎಂದು ಕೇಳಿದನು,

ಆತ ಜಿತೇಂದ್ರನಾಗಿದ್ದ.

ಸೇವಾಸಂಘದಲ್ಲಿ ಆತನಂತಹ ತತ್ಪರ ಕಾರ್ಯಕರ್ತ ಇನ್ನೊಬ್ಬನಿರಲಿಲ್ಲವೆಂಬುದನ್ನು ಎಲ್ಲರೂ ಬಲ್ಲರು. ಅಷ್ಟೇ ಅಲ್ಲದೆ ಆ ಬಾಲೆಯನ್ನು ಸೇವಾಸಂಘದಲ್ಲಿ ತಂದು ಸೇರಿಸಿದವನು ಜಿತೇಂದ್ರನೇ ಆಗಿದ್ದ.

"ನಾನು ಒಮ್ಮಿಂದೊಮ್ಮೆಯೇ ಹೊರಟು ಹೋಗಿದ್ದೆ, ಅಂತೆಯೇ ಅಕಸ್ಮಾತ್ತಾಗಿ ತಿರುಗಿ ಬಂದೆ, ನೀವು ಎರಡು ವರ್ಷದ ಹಿಂದೇ ಕರೆಯಿಸಿದ್ದಿರಿ. ಆಗ ನನಗೆ ಬರಲಾಗಲಿಲ್ಲ!"

"ಹಾಗಾದರೆ ನೀವಿಲ್ಲಿ ಪುನಃ ಕೆಲಸ ಮಾಡಲು ಬರುವಿರಾ?"

"ಹೌದು ಇಂದಿನಿಂದಲೇ ಕೆಲಸ ಮಾಡಲು ಸಿದ್ಧಳಿರುವೆ"

"ಹಾಗಾದರೆ ನಾನೆಂದುದೇ ದಿಟವಾಯಿತಲ್ಲ?"ಎಂದು ಕಾರ್ಯದರ್ಶಿಯು ನುಡಿದ.

"ನೀವು ಯಾವಹೆಸರಿನಿಂದ ಕೆಲಸ ಮಾಡುವಿರಿ? ಈಗಿನ ಹೆಸರಿನಿಂದಲೋ ಹಿಂದಿನ ಹೆಸರಿನಿಂದಲೋ"

"ಇದೇ ಹೆಸರಿನಿಂದ"

"ಯಾಕೆ? ಹೊಸದೊಂದು ಹೆಸರಿಟ್ಟರೆ ಆಗದೇ?"

"ಬೇಡ, ನನಗಿನ್ನಾವ ಹೆಸರೂ ಬೇಡ, ನಾನು ನಿಜವಾಗಿಯೂ ಪತಿತ ಬಾಲೆಯೆಂಬುದನ್ನು ಜಗತ್ತಿಗೆ ತೋರಿಸ ಬೇಕಾಗಿದೆ"

"ನೀನು ಎಂದಿನಿಂದಲೂ ಹಾಗೇ ಇರುವಿ"ಎಂದು ಕಾರ್ಯದರ್ಶಿಯೆಂದ.

"ಇಲ್ಲ ಹಿಂದೆ ಆಕೆ ಹೆಚ್ಚು ಕಲಿತಿರಲಿಲ್ಲ. ಇಂದು ಡಾಕ್ಟರಿ ಓದುತ್ತಿದ್ದಾಳೆ"ಎಂದು ಜಿತೇಂದ್ರ ನುಡಿದ.

"ಅದನ್ನೆಲ್ಲ ನಾನೀಗ ಬಿಟ್ಟು ಬಿಟ್ಟೆ"

"ಯಾಕೆ?"

ನನ್ನೆಲ್ಲ ಶಕ್ತಿಸರ್ವಸ್ವವನ್ನೂ ಒಂದೆಡೆಯಲ್ಲಿಯೇ ವೆಚ್ಚಮಾಡ ಬೇಕೆಂದು”

“ಈಗಲೂ ಹಾಗೇ ಮಾಡಲು ಬಯಸಿರುವೆಯಾ ?”

“ಹೌದು”

‘‘ಉಹೂಂ ಈಗ ಹಾಗೆಲ್ಲಿ ಸಾಧ್ಯವಿದೆ ? ವ್ರಜೇಶನೊಡನೆ ನಿಮ್ಮ ಲಗ್ನ ವಾಗಲಿಲ್ಲವೇ ?”

“ಇಲ್ಲ”ಎಂದಳು. ಆಕೆಯ ಮೋರೆ ಕೆಂಪೇರಿತು.

೧೦

ಬಾಲೆಯು ಸೇವಾ ಸಮಿತಿಯನ್ನು ಸೇರಿದಂದಿನಿಂದ ವ್ರಜೇಶನಿಗೆ ನಿರಾಶೆಯುಂಟಾಯಿತು. ಕಾಲೇಜು ಜೀವನದಲ್ಲಿ ಕಾಲಿಟ್ಟ ಪ್ರಥಮ ವರ್ಷದಲ್ಲಿಯೇ ಕೆಲವು ಕವನಗಳನ್ನು ಬರೆದು ಪತ್ರಿಕೆಗಳಿಗೆ ಕಳಿಸಿದ್ದ. ಆದರೆ ಒಂದೂ ಮುದ್ರಿತವಾಗಿರಲಿಲ್ಲವಾದುದರಿಂದ ಆದರ ಗೊಡವೆಗೇ ಹೋಗಿರಲಿಲ್ಲ. ಅಲ್ಲದೆ ರಸಾಯನಶಾಸ್ತ್ರ, ಭೌತಿಕ ಶಾಸ್ತ್ರಗಳ ಅಭ್ಯಾಸದಲ್ಲಿಯೇ ತೊಡಗಿದ್ದುದರಿಂದ ಆತನಿಗೆ ವೇಳೆಯೂ ಇರಲಿಲ್ಲ ಅಕಸ್ಮಾತ್ತಾಗಿ ಹಿಂದೆ ಬರೆದ ಪದ್ಯಗಳ ಪಟ್ಟಿ ಕಣ್ಣಿಗೆ ಬಿದ್ದುದರಿಂದ ಎಲ್ಲವನ್ನೂ ಓದಿ, ಹೊಸದೊಂದು ಪದ್ಯ ಬರೆದ ಪ್ರೇರಣೆ ಯುಂಟಾಯಿತು. ಬರೆದು ಪತ್ರಿಕೆಗೂ ಕಳಿಸಿದ ಒಂದೆರಡು ದಿನದಲ್ಲಿಯೇ ಫೊಟೋ ಕಳಿಸಬೇಕೆಂದೂ, ಇನ್ನೂ ಕವನಗಳನ್ನು ಕಳಿಸಬೇಕೆಂದೂ ಸಂಪಾದಕನು ವಿನಂತಿಮಾಡಿ ಕೊಂಡಿದ್ದ.

ಈ ಪತ್ರ ಬಂದ ಹದಿನೈದು ದಿನದಲ್ಲಿ ಇನ್ನೊಂದು ೨೫ ಸಾಲಿನ ಪದ್ಯ ಬರೆದು ಕಳಿಸಿದ. ಆದರಲ್ಲಿ ಹತ್ತು ಸಲ “ತಡಿತ್”ಎಂಬ ಶಬ್ದದ ಉಪಯೋಗ ವಾಗಿತ್ತು. ಆದನ್ನೋದಿ ಬಾಲೆಯು ಕ್ರುದ್ಧಳಾಗಿಒಂದು ಪತ್ರ ಬರೆದಳು.

‘‘ ಮಹಾಶಯರೇ, ”

ನಿಮ್ಮ ಪದ್ಯಗಳ ಬಗ್ಗೆ ನೀವೆಂದಾದರೂ ಗಂಭೀರವಾಗಿ ಯೋಚಿಸಿರುವಿರಾ ? ಇಂತಹ ಕವನಗಳನ್ನು ದೇಶೋದ್ಧಾರ ಕಾರ್ಯಕ್ಕೆ ಕಂಕಣ ಬದ್ಧವಾಗಿದ್ದೇವೆಂದು ಸಾರುವ ಪತ್ರಿಕೆಯವರು ಯಾವರೀತಿಯಿಂದ ಮುದ್ರಿಸುತ್ತಾರೆಂಬುದೂ ತಿಳಿಯದಾಗಿದೆ. ಇಲ್ಲವಾದರೆ ಇಂತಹ ವಾಸನಾಮಯ ಪದ್ಯಗಳು ಜನತೆಯೆದುರಿಗೆ ಬರುವುದು ಸಾಧ್ಯವಿರಲಿಲ್ಲ. ನೀವು ನೇರವಾಗಿ

ಕಲೆಯನ್ನು ವಿವಾಹವಾಗಿರಿ, ಇಲ್ಲವೆ ಇನ್ನಾರನ್ನಾದರೂ ಲಗ್ನವಾಗಿ ಶಾಂತಿ ಸಮಾಧಾನಗಳಿಂದ ಬಾಳಿರಿ, ಅನನ್ನೆಲ್ಲ ಬಿಟ್ಟು ಇಂತಹ ಪದ್ಯಗಳನ್ನು ಬರೆದು ಮಾತೃಭಾಷೆಯ ಅಪಮಾನ ಮಾಡಬೇಡಿರಿ,

ತಮ್ಮ ಶುಭಾಕಾಂಕ್ಷಿ ಬಾಲಾ

ಈ ಪತ್ರದಿಂದ ಆತನಿಗೆ ತುಂಬಾ ದುಃಖವಾಯಿತು. ಒಂದೆರಡು ದಿನ ಯಾರಿಗೂ ಕಾಣಿಸಿಕೊಳ್ಳಲಿಲ್ಲ. ಪ್ರಕೃತಿ ನೆಟ್ಟಗಿಲ್ಲವೆಂದು ಹೇಳಿದ ಮೂರನೆಯದಿನ ನಿಜವಾಗಿಯೂ ಜ್ವರ ಬಂದಿತು. ಆಗ ಆಳನ್ನು ಕರೆದು 'ನನ್ನ ಸ್ಥಿತಿಯು ಶೋಚನೀಯವಾಗಿದೆಯೆಂದು ತಡಿತಬಾಲೆಗೆ ಹೇಳಿ ಕೂಡಲೇ ಕರೆದು ಕೊಂಡು ಬಾ' ಎಂದು ಆಜ್ಞಾಪಿಸಿದನು. ಆದರೆ ಆಕೆ ಬರಲಿಲ್ಲ. ಬಂದೇನು ಮಾಡುವೆ. ಮಧ್ಯಾಹ್ನ ಸೇವಾಸಂಘದ ಡಾಕ್ಟರನನ್ನು ಕಳಿಸುತ್ತೇವೆ' 'ತಾನು ಎಂದು ಹೇಳಿಕಳುಹಿಸಿದಳು.

ಅಂತೂ ಒಂದೆರಡು ದಿನದ ನಂತರ ವ್ರಜೇಶನಿಗೆ ಗುಣವಾಯಿತು. ಒಂದು ವಾರದ ನಂತರ ತಾನಾಗಿಯೇ ಬಾಲೆ ಇದ್ದಲ್ಲಿಗೆ ಹೋದ. ಆದರೆ ಆಕೆ ಮನೆಯಲ್ಲಿಲ್ಲವೆಂದು ಅವಳ ತಮ್ಮ ಹೇಳಿದುದರಿಂದ ಸುಮ್ಮನೆ ಮರಳಬೇಕಾಯಿತು.

ಆದೇದಿನ ಕಲೆಯ ತಂದೆಗೆ 'ವಿವಾಹದ ಮುಹೂರ್ತವನ್ನು ತಿಳಿಸಿರಿ ಝಾಂಸಿಗೆ ಬಂದು ಲಗ್ನವಾಗುವೆ, ಎಂದು ತಾರು ಮಾಡಿದ.

''ನಿಮ್ಮ ತಾಯಿ ಒಪ್ಪುವದಿಲ್ಲ. ಲಗ್ನ ನೆರವೇರುವಂತಿಲ್ಲವಾದುದಕ್ಕಾಗಿ ವಿಷಾದವೆನಿಸುತ್ತದೆ'' ಎಂದು ಮರುತಾರು ಬಂದಿತು.

ತಾಯಿಗೊಂದು ಪತ್ರ ಬರೆದ. ''ಅಮ್ಮಾ' ನೀವು ಲಗ್ನಕ್ಕೆ ಒಪ್ಪುವದಿಲ್ಲವೆಂದು ಅಶೋಕಕುಮಾರರು ತಾರಿನಿಂದ ತಿಳಿಸಿದ್ದಾರೆ. ಅವರು ಬೇಕೆಂತಲೇ ಬರೆದಿರಬೇಕೆಂದು ನನಗನಿಸುತ್ತದೆ. ಮೊದಲಂತೂ ಅವರೇ ನನಗೆ ಅನೇಕಸಲ ಒತ್ತಾಯ ಮಾಡುತ್ತಿದ್ದರು.

ಅಲ್ಲಿಯ ತನಕ ನೀವು ಅಲ್ಲಿಯೇ ಇದ್ದು ಅವರೊಡನೆ ಮಾತನಾಡಿ ವ್ಯವಸ್ಥೆ ಮಾಡಬೇಕು. ಇಲ್ಲಿ ಅನೇಕ ಜನರು ನನಗೆ ಹೆಣ್ಣು ಕೊಡಲು ತಯಾರಿದ್ದಾರೆ. ಆ ಮೇಲೆ ಅದರ ಬಗ್ಗೆ ಬರೆಯುವೆ. ಬೇಗನೆ ಉತ್ತರಬರೆ''

ಈ ಪತ್ರಓದಿ ವ್ರಜೇಶನ ತಾಯಿಗೆ ಆಶ್ಚರ್ಯವಾಯಿತು ಆಕೆಯು ಅದೇದಿನ ಆ ಪತ್ರವನ್ನು ಉಮೆಗೆ ತೋರಿಸಿ "ನನ್ನ ಸಂಬಂಧಿಕರು ಒಪ್ಪದಿದ್ದರೂ ನಾನು ಈ ಲಗ್ನಕ್ಕೆ ಸಮ್ಮತಿಸಿದ್ದೆ. ಆದರೆ ಅಶೋಕ ಕುಮಾರರು ಇದೇಕೆ ಹೀಗೆ ಮಾಡಿದರೋ ತಿಳಿಯದು" ಎಂದಳು.

"ವ್ರಜೇಶನಿಗೆ ಕಲಿಯನ್ನು ಕೊಡುವ ಮನಸ್ಸಿಲ್ಲ"

"ಯಾಕೆ ?"

"ಯಾಕಂದರೆ ತಡಿತ ಬಾಲೆಯನ್ನು ವ್ರಜೇಶನು ಪ್ರೀತಿಸುತ್ತಿದ್ದಾನೆ"

"ಆ ! ಯಾರು ಆಕೆ ?"

"ಅವಳು ಹಿಂದುವಲ್ಲ; ಅಲ್ಲದೆ ಆಕೆಯೂ ವ್ರಜೇಶನೊಡನೆ ಲಗ್ನಮಾಡಿಕೊಳ್ಳುವದಿಲ್ಲವೆಂದು ನಿಶ್ಚಯಿಸಿದ್ದಾಳೆ. ಆಕೆ ವ್ರಜೇಶನ ಸಹಾಯದಿಂದಲೇ ಡಾಕ್ತರೀ ಓದುತ್ತಿದ್ದಳು. ಈಗ ಅವನ್ನೆಲ್ಲ ಬಿಟ್ಟು ಸೇವಾಸಂಘದಲ್ಲಿ ಸೇರಿದ್ದಾಳೆ."

"ಹಾಗಾದರೆ ವ್ರಜೇಶನಿಗೆ ಎಲ್ಲಿಯೂ ಹೆಣ್ಣು ಸಿಗಲಿಕ್ಕಿಲ್ಲವೆಂದು ನಿಮ್ಮ ಅಭಿಪ್ರಾಯವೇ ?"

"ಈಗ ಹೆಣ್ಣು ಸಿಗುವದೇನು ಅಸಂಭವವೆಂದು ಹೇಳುವದಿಲ್ಲ. ಆದರೆ ಇನ್ನು ಮುಂದೆ ಮಾತ್ರ ನನ್ನ ಅಕ್ಕತಂಗಿಯಂದಿರು ಇಂತಹ ಚಂಚಲ ಗಂಡಂದಿರಿಗೆ ಹೆಣ್ಣು ಸಿಗದಂತೆ ಮಾಡಲೇಬೇಕು. ಈಗ ವ್ರಜೇಶ ತಡಿತ ಬಾಲೆಯನ್ನೇ ಲಗ್ನವಾಗಬೇಕಾದುದು ಉಚಿತವಾಗಿದೆ."

"ಆದರೆ ಆಕೆ ಹಿಂದುವಲ್ಲವಲ್ಲ ?"

"ಹಾಗಾದರೆ ಕಲಿಯಾದರೂ ಎಲ್ಲಿಯ ಹಿಂದು ? ಅವಳಿಗೂ ಹಿಂದೂ ಧರ್ಮದ ಬಗ್ಗೆ ಅಷ್ಟೇನೂ ಶ್ರದ್ಧೆಯಿಲ್ಲ"

"ಅಂತೂ ಜನರೆಲ್ಲ ಆಕೆಗೆ ಹಿಂದುವೆಂದೇ ಕರೆಯುತ್ತಾರಲ್ಲ ?"

"ಏನೇ ಇರಲಿ. ಹಿಂದು ಮತ್ತು ಹಿಂದುಸ್ತಾನಿಯರೆಂದರೆ ಬೇರೆಯಲ್ಲ ಬಾಲೆಯೊಡನೆ ಲಗ್ನವಾಗಲು ತಮ್ಮದೇನೂ ಆತಂಕವಿಲ್ಲವೆಂದು ನೀವು ಮಗನಿಗೆ ಬರೆದು ಬಿಡಿರಿ. ನೀವು ವಿಚಾರಮಾಡಿ ನೋಡಿದರೆ ವ್ರಜೇಶ ಹಾಗೂ ತಡಿತಳ ಜಾತಿ ಒಂದೇ. ಅವರಿಬ್ಬರೂ ಡಾಕ್ತರರೇ ಸರಿ ?"

"ಡಾಕ್ಟರ ಜಾತಿ ?"

" ಅದೇಕಲ್ಲ ? ಸೋನಾರ, ಬಡಿಗೇ, ಜಾತಿಯಲ್ಲ ಬಂದದು ಅವರ ವರ ಉದ್ಯೋಗದ ಮೇಲಿನಿಂದ. ಅಂದಬಳಿಕ ಡಾಕ್ಟರರ, ವಕೀಲರ ಜಾತಿ-ಉಂಟಾದರೆ ತಪ್ಪೇನು ? "

" ಎಲ್ಲರೂ ಒಪ್ಪಿದಾಗ ನಾನೂ ಒಪ್ಪುವೆ. "

" ಈಗಾಗಲೇ ಎಷ್ಟೋ ಮುಂದಾಳುಗಳು ಈ ರೀತಿಯ ಲಗ್ನವನ್ನು ಪುರಸ್ಕರಿಸಿದ್ದಾರೆ ನೀವು ಆದೆಮಾಲೆಯೊಳಗಿನ ಮಣಿಯಾಗಬಾರದೇಕೆ ? "

" ಅಂತಹ ಜನವೆಷ್ಟು ಕಷ್ಟ ಸೋಸಬೇಕಾಗುತ್ತದೆಂದು ಅರಿಯೆಯಾ? ಅವಕ್ಕೆಲ್ಲ ನಾನು ಸಿದ್ಧಳಿಲ್ಲ. "

" ಅಂತವರೇ ಮುಂದೆ ಪೂಜಾರ್ಹರಾಗುತ್ತಾರೆ. ಜಾತಿ ಪಂಥಗಳನ್ನು ಮುರಿದು ಕಲೆಯೊಡನೆ ಮಗನ ಮದುವೆ ಮಾಡಲು ಸಿದ್ಧಳಿರುವಾಗ ಇನ್ನೊಂದು ಹೆಜ್ಜೆ ಮುಂದೇಕೆ ಹೋಗಬಾರದು ? "

" ಕಲೆ ನಿನ್ನ ಗೆಳತಿ. ಅವಳ ಲಗ್ನದಬಗ್ಗೆ ನಿನಗೆ ವಿಶೇಷ ಕಾಳಜಿ ಇರಬೇಕಿತ್ತು. ಅದೆಲ್ಲ ಬಿಟ್ಟು ಇನ್ನಾವಳನ್ನೋ ಹೊಗಳುತ್ತಿರುವೆಯಲ್ಲ ? "

" ನಾನು ನಿಮ್ಮೊಡನೆ ಯಾರನ್ನೂ ಹೊಗಳುತ್ತಿಲ್ಲ. ಇಬ್ಬರೂ ಸುಗುಣಿಗಳು ಸಿಫಾರಸಿನ ಪತ್ರ ಬೇಡ ಅವರಿಗೆ. ಮುಂದಿನ ಜನಾಂಗದ ಪ್ರತಿನಿಧಿಗಳವರು. ಗರ್ವವನ್ನೇ ಹೆಚ್ಚಿಸುವ ಬುದ್ಧಿವಾದ-ಮೂರ್ಖತಾಪೂರ್ಣ, ಸೈನಿಕವಾದಗಳಿಂದ ಮುಂಗಾಣದ ಜನತೆಗೆ ದಾರಿ ತೋರುವವರು ಅವರು. " ಆಕೆಯು ಗಂಭೀರವಾಗಿ ಹೇಳಿದುದರಿಂದ ಅದರ ಪರಿಣಾಮವಾಗದೇ ಹೋಗಲಿಲ್ಲ

" ಮಗೂ, ನನ್ನಕಾಲ ಹಿಂದಿನದಾಯಿತು. ಈಗನವಳೂ ಅಲ್ಲನಾನು"

" ಯಾರಾದರೂ ಈ ಹಾದಿಯನ್ನು ಹಾಕಲೇ ಬೇಕೆಂದು ಗೊತ್ತಿದ್ದರೂ,–ನಾವು ಹಿಂದೆ ಮುಂದೆ ನೋಡುವದೇಕೆ ? "

" ಆಗಲಿ, ನಾಳೆ ಬಾ, ನಾವಿಬ್ಬರೂ ಕೂಡಿ ವ್ರಜೇಶನಿಗೆ ಪತ್ರ ಹಾಕೋಣ "

" ಸಾಯಂಕಾಲ ಬರುವೆ. ಆದರೆ ಅಮ್ಮಾ, ನೀನು ಇಲ್ಲಿಂದ ಊಟ ಮಾಡದೆ ಹಾಗೇ ಹೋಗಲಾರೆ "

ಬಾಲೆಯು ತನ್ನ್ನನೂ ತನ್ನ ಹೆಸರನ್ನು ಕಿರಣಗುಪ್ತನೆಂದು ಬದಲಿಸಿ ಕೊಂಡಿದ್ದಾನೆ. ಆತ ಪರೀಕ್ಷೆಯಲ್ಲಿ ಮೊದಲನೇ ಬಂದುದರಿಂದ ೧೫ ರೂಪಾ

ಯಿಯ ಸ್ಕಾಲರೂ ಒಂದೆಡೆಯಲ್ಲಿ ಟ್ಯೂಶನೂ ದೊರೆತಿತು. ಅದರಿಂದ ಆತ ಅಕ್ಕನಿಗೆ ಒತ್ತಾಯಮಾಡಿ ಸೇವಾಸಂಘದಿಂದ ಬಿಡಿಸಿ ಡಾಕ್ಟರಿಯನ್ನು ಕಲಿಯ ಹಚ್ಚಿದ. ಆಕೆಗೂ ಒಂದೆರಡು ಟ್ಯೂಶನ್ನು ದೊರೆತಿತ್ತು. ಅಲ್ಲದೆ ಆಕೆ ಯೊಂದು ಹೊಸ ಕಾದಂಬರಿ ಮುಗಿಸುವದರಲ್ಲಿದ್ದಳು. ಮೂಲಬೆಲೆಯ ಮೇಲೆ ೧೦೦ ಕ್ಕೆ ೩೦ ರಂತೆ ಸಿಗುವ ಹಾಗೆ ವ್ಯವಸ್ಥೆ ಮಾಡಿಸುವೆನೆಂದು ಜಿತೇಂದ್ರ ಆಶ್ವಾಸನವನ್ನಿತ್ತ.

ಆ ಕಾದಂಬರಿ ಅವರ ಘಟನೆಯನ್ನೇ ಹೋಲುತ್ತಿತ್ತು. ಆದರೆ ಸುಖಾಂತವನ್ನಾಗಿ ಮಾಡಿದ್ದಳು. ಅದರಲ್ಲಿಯ ನಾಯಿಕೆ ಡಾಕ್ಟರೀ ಪಾಸಾಗಿ ಡಾಕ್ಟರನೊಡನೆ ಲಗ್ನವಾಗುತ್ತಾಳೆ. ಆ ಕಾದಂಬರಿಯನ್ನು ಮುಗಿಸಿ "ಅಯ್ಯೋ, ದೇವರ ಇಚ್ಛೆ ಇದ್ದಿದ್ದರೆ ನನ್ನ ಸ್ಥಿತಿಯೂ ಹೀಗೇ ಆಗುತ್ತಿತ್ತಲ್ಲ" ಎಂದು ಉಸಿರೆಳೆದಳು

"ಒಂದು ದಿನ ಜಿತೇಂದ್ರ ಅದರ ಹಸ್ತ ಪ್ರತಿಕೆಯನ್ನು ತಿರುಗಿ ತಂದು "ಮುದ್ರಿಸಲು ಎಲ್ಲರೂ ಸಿದ್ಧರಿದ್ದಾರೆ. ಆದರೆ ಹಣಕೊಡುವದೆಂದರೆ ಮಾತ್ರ ಸಿದ್ಧರಿಲ್ಲ"

"ಹೇಗೂ ಆಗಲಿ, ಸ್ವಾಂತ ಸುಖಾಯ ಬರೆದ ಪುಸ್ತಕವದು ಮುದ್ರಿತವಾದರೆ ಸಾಕು"

ಇಪತ್ತೇದಿವಸಗಳಲ್ಲಿ ಪುಸ್ತಕ ಹೊರಬಿದ್ದಿತು ಅಲ್ಲಿಂದ ಒಂದುವಾರ ದೊಳಗಾಗಿ ವ್ರಜೇಶನ ಪತ್ರ ತಲುಪಿತು.

"ಬಾಲಾ, ನಿನ್ನ ಉಪನ್ಯಾಸ ಓದಿದೆ. ಅದು ನಿನ್ನದೇ ಕತೆ, ಸುಖಾಂತವಾಗಿದೆ ಆ ಪುಸ್ತಕ ಆದರೆ ನಿನ್ನ ಅಂತರ್ದಶಿ ಹಾಗೆ ಮಾಡಗೊಡದಿದ್ದದಕ್ಕಾಗಿ ದೇವರಿಗೆ ಅನೇಕ ವಂದನೆಗಳು

'ನೀನು ಮನಸಿನ ಚಿತ್ರಿಸಿದ ಚಿತ್ರವನ್ನು ಹಾಳುಮಾಡಲಿಕ್ಕಿಲ್ಲೆಂದು ಬಯಸುವ, ವ್ರಜೇಶ."

ಬಾಲೆಯು ಮರುಟಪಾಲಿಗೇ ಉತ್ತರ ಬರೆದಳು.

"ಪತ್ರ ತಲುಪಿತು ನಿಮ್ಮ ಅಭಿಪ್ರಾಯಕ್ಕಾಗಿ ಋಣಿಯಾಗಿದ್ದೇ

ನಾನು ಸೇವಾಸಂಘದಲ್ಲಿ ಸೇರಬೇಕೆಂದು ಹವಣಿಸಿದ್ದೆ. ಆದರೆ ತಮ್ಮನು ಈ ರೀತಿ ಒತ್ತಾಯಮಾಡಿ ಡಾಕ್ಟರಿಯಲ್ಲಿ ಸೇರಿಸುವನೆಂದು ತಿಳಿದಿರಲಿಲ್ಲ.

ಡಾಕ್ಟರೀ ಕಲಿತೊಡನೆಯೇ ಸೇವಾಸಂಘದಲ್ಲಿ ಸೇರುವೆ. ಕಾದಂಬರಿ ಕಲ್ಪಿತ ಕ್ಷೇತ್ರವೇ ಹೊರತು ಅದೇ ಸತ್ಯವಲ್ಲ.

ನಿಮ್ಮ ತಾಯಿಯ ಇಚ್ಛೆಯನ್ನಷ್ಟು ಪೂರ್ತಿಮಾಡಿರಿ. ಅವಳಿಗಾಗಿ ನೀವು ಮಾಡಬೇಕಾದ ಕರ್ತವ್ಯವಿದೆಯೆಂಬುದನ್ನು ಮರೆಯಬೇಡಿ. ಇಷ್ಟೊತ್ತಿಗೆ ನಿಮ್ಮ ಲಗ್ನದ ಆಮಂತ್ರಣಪತ್ರ ಕೈಸೇರಬಹುದೆಂದು ತಿಳಿದಿದ್ದೆ.

ಇವೆಲ್ಲ ಜಿತೇಂದ್ರನ ಪರಿಶ್ರಮದ ಫಲ. ಇಷ್ಟು ಬೇಗ ಬೆಳಕು ಕಂಡು ದಕ್ಕು ಆತನೇಕಾರಣ. ಇನ್ನೊಂದು ಕಾದಂಬರಿಯನ್ನು ಬರೆಯಲಾಗುತಿದೆಯೋ ಇಲ್ಲವೋ ? ಈಗಲೇ ಹೇಳಲಾರೆ

ಬಾಲಾ"

ಜಿತೇಂದ್ರನ ಮೇಲೆ ಈರ್ಷೆಯುತ್ಪನ್ನವಾಯಿತು. ಪ್ರಕಾಶಕನು ಎಷ್ಟು ಹಣ ಕೊಟಿದ್ದಾನೆಂದು ತಿಳಿಯುವ ಕುತೂಹಲವಾದುದರಿಂದ ಪ್ರಕಾಶಕನಿದ್ದಲ್ಲಿಗೆ ಅದೇ ದಿನ ಹೊರಟ. ವ್ರಜೇಶನಂತಹ ಡಾಕ್ಟರನ ಆವಶ್ಯಕತೆ ಎಂದಾದರೂ ಒದಗ ಬಹುದೆಂದು ಆ ಪ್ರಕಾಶಕ ಎಲ್ಲ ಕರಾರುಗಳನ್ನು ತಿಳಿಸಿದ.

" ನೀವು ಅವರನ್ನು ತುಂಬಾ ಮೋಸಗೊಳಿಸಿದಿರಿ."

" ನನ್ನ ಹತ್ತರ ಇಂತಹ ಹೊಸ ಲೇಖಕರ ಪ್ರತಿಗಳೆಷ್ಟೋ ಬಂದು ಬಿದ್ದಿವೆ ಜಿತೇಂದ್ರನ ಮಾತಿನ ಮೇಲಿಂದ-ಇದನ್ನು ಇಷ್ಟು ಬೇಗನೆ ಮುದ್ರಿಸಿದೆ. ನಿಮಗೆ ಅವರೊಡನೆ ಸಂಬಂಧವೇನಾದರೂ ಇದೆಯೇ ? ಏನೇ ಇರಲಿ ಈಗ ನೀವು ಏನು ಹೇಳುತ್ತಿರೋ ಅದರಂತೆ ನಡೆಯಲು ಸಿದ್ಧನಿದ್ದೇನೆ. ನಿಮ್ಮ ಕರಾರನ್ನಾದರೂ ತಿಳಿಸಿ."

" ಲೇಖಕಿಯನ್ನು ಕರೆದುಕೊಂಡು ಬರುವೆ. ಆಮೇಲೆ ಮಾತಾಡುವೆ" ಎಂದು ಹೊರಟುಹೋದ

ಮೂರನೇ ದಿನ ಬೆಳಿಗ್ಗೆ ಇಬ್ಬರೂ ಪ್ರಕಾಶಕನಲ್ಲಿಗೆ ಹೊರಟರು. ದಾರಿಯಲ್ಲಿಯೇ ಜಿತೇಂದ್ರನ ಭೆಟ್ಟಿಯೂ ಆಯಿತು. ಬಾಲೆಯು ವ್ರಜೇಶನನ್ನು ಮಾಸ್ತರ ಸಾಬ" ಎಂದೇ ಕರೆಯಹತ್ತಿದ್ದಳು. ಆಕೆ ಮೊದಲು ಮಿಸ್ಟರ ವ್ರಜೇಶ ಎನ್ನುತ್ತಿದ್ದಳು

ಅವರೆಲ್ಲ ಪ್ರಕಾಶಕನಲ್ಲಿಗೆ ಹೋಗಿ ಮುಟ್ಟಿದರು. ಸಮಾಧಾನಕರವಾಗಿ ಕರಾರುಗಳು ನಡೆದವು. ಆಮೇಲೆ ಜಿತೇಂದ್ರನು ವ್ರಜೇಶನಿಗೆ " ನಾವಿಬ್ಬರು ಅಣ್ಣತಂಗಿಯಂದಿರು ನಿಮಗೆ ಕೃತಜ್ಞರಾಗಿದ್ದೇವೆ" ಎಂದು ಹೊರಟು ಹೋದನು.

"ಬಾಲಾ, ಅನ್ಯಾಯಕ್ಕೆ ಮಾಡುವ ಶಿಕ್ಷೆಗೂ ಒಂದು ಮಿತಿ ಇದೆ. ನನ್ನ ಬಗ್ಗೆ ನೀನು ತೋರುತ್ತಿರುವ ರೀತಿ ಸರಿಯಾದುದೆಂದು ನೀನೊಮ್ಮೆಯಾದರೂ ಯೋಚಿಸಿರುವೆಯಾ ?"

"ನಿಮ್ಮ ಉಪಕಾರವನ್ನು ನಾನು ಮರೆಯುವಂತಿಲ್ಲ. ಈಗಲಾದರೂ ನೀವೂ ಅಪರಾಧ ಮಾಡಿಲ್ಲ. ನಾನೂ ಮಾಡಿಲ್ಲ, ಆದರೆ ನಿಮ್ಮ ತಾಯಿಗಾಗಿ ನನ್ನಂಥವಳಾದ ಕಲೆಗಾಗಿ ನಾನು ಮಾಡಬೇಕಾದುದೇನೂ ಇಲ್ಲವೇ ?"

"ಬಾಲಾ, ಇನ್ನೊಮ್ಮೆ ಯೋಚಿಸು ನಾವೆಂತಹ ಉಜ್ವಲ ಕನಸ ಕಂಡಿದ್ದೆವು. ಎರಡೂ ಮನೆಯವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ, ಸಮಾಜ ಸೇವೆಯನ್ನು ಮಾಡಬೇಕೆಂದು ಬಯಸಿದ್ದೇವಲ್ಲವೇ? ಜನಕೆಗೊಂದು ಹಾದಿ ಹಾಕಿ ಕೊಡಬೇಕೆಂದು ಆಶಿಸಿದ್ದೇವಲ್ಲವೇ ? ಈಗ ಅವನ್ನೆಲ್ಲ ಕನಸನ್ನಾಗಿಯೇ ಮಾಡಿಬಿಟ್ಟೆಯಲ್ಲ ! ನಾನು ನಿನ್ನನ್ನೇ ನಂಬಿದ್ದೆ."

"ಈಗಲಾದರೂ ನಾವು ಬಯಸಿದಂತೆಯೇ ಆಗುತ್ತಲಿದೆಯಲ್ಲವೇ ? ನಿಷ್ಕಾಮ ಕರ್ಮ ಮಾಡಬೇಕೆಂದು ನೀವೂ ಯೋಚಿಸುತ್ತಿದ್ದಿರಿ. ನಾನೂ ಅದೇ ದಾರಿಯಲ್ಲೇ ಇದ್ದೇನೆ."

"ಕೃತಜ್ಞತೆಯನ್ನು ತೋರಿಸುವ ರೀತಿಯು ಇದೇ ಅಲ್ಲವೇ ?"

"ಮಾಷ್ಟರ ಸಾಹಬ, ನಾನಂತೂ ಇದೇ ಯೋಗ್ಯವೆಂದು ಭಾವಿಸಿದ್ದೇನೆ."

"ಇದೇನು ಕರೆಯುತ್ತೀಯೋ ? ಮಾಸ್ತರ ಸಾಹಬ, ಮಾಸ್ತರ ಸಾಹೇಬ ಎಂದು ನನಗೇಕೆ ಸಿಟ್ಟು ಬರಿಸುತ್ತೀಯೆ. ಕಲಿಸುತ್ತಿರುವಾಗಲೂ ಸಹ ನೀನೊಮ್ಮೆಯೂ ಮಾಸ್ತರ ಎಂದು ಕರೆದುದಿಲ್ಲ. ನೀನೀಗ ದೊಡ್ಡ ನಿಸ್ವಾರ್ಥ ಸೇವಕಿಯಾಗಿರುವಿಯೆಂದು ಬಲ್ಲೆ. ಹಿಂದೆ ನೀನೆಷ್ಟು ಸ್ವಾರ್ಥತ್ಯಾಗಿ-ಪ್ರಗತಿಗಾಗಿ ಹವಣಿಸುತ್ತಿದ್ದೆ ? ಬಾಲಾ, ನಿನ್ನನ್ನೇ ನೀನು ಮೋಸಗೊಳಿಸಿಕೊಳ್ಳಬೇಡ."

ಬಾಲೆ ಅಳಹತ್ತಿದಳು. ವ್ರಜೇಶನ ಮೋರೆ ವಿವರ್ಣವಾಯಿತು.

೧೨

ಉಮೆಯು ತನ್ನ ಗಂಡನ ಸಲಹೆ ಪಡೆದು ವ್ರಜೇಶನಿಗೊಂದು ಪತ್ರ ಬರೆದಿದ್ದಳು. ಅದನ್ನು ತೆಗೆದುಕೊಂಡು ವ್ರಜೇಶನ ತಾಯಿ ಇದ್ದಲ್ಲಿಗ ಹೋದಳು, ಆದರೆ ಆಕೆಯ ಮನಸ್ಸಿಗೆ ಬರಲಿಲ್ಲ. ಆದರಲ್ಲಿ ಹೀಗಿತ್ತು:

"ಪ್ರಿಯ ವ್ರಜೇಶ,

ನಿನ್ನ ಪತ್ರದ ವಿಷಯ ಅನಿರೀಕ್ಷಿತವಿದ್ದುದರಿಂದ ಉಮೆಯ ಬಳಿಗೆ ಹೋದೆ. ನೀನು ತಾರುಮಾಡಿದ ವಿಷಯುವನ್ನೆಲ್ಲ ಆಕೆ ಹೇಳಿದಳು. ನನ್ನ ಸಹೋದರರಿಬ್ಬರೂ ಈ ವಿವಾಹವನ್ನು ಒಪ್ಪುವದಿಲ್ಲವೆಂದು ನೀನು ಬಲ್ಲಿ. ಆದರೆ ತರುಣರಾದವರು ಹೊಸವಿಚಾರ ಮಾಡಿ ದೇಶದ ಮುನ್ನಡೆಗೆ ಕಾರಣ ರಾಗುವಂತಿದ್ದರೆ ನಾನೇಕೆ ಬೇಡವೆನ್ನಲಿ ? ಎಂದು ಸುಮ್ಮನಿದ್ದೆ. ಹಿಂದಿನ ಕಾಲದಲ್ಲಿಯೂ ಹಿಂದೂ ಜನರು ಪರಕೀಯರೊಡನೆ ವಿವಾಹವಾದ ಹಲವಾರು ಉದಾಹರಣೆಗಳಿವೆ. ಶಾಕ್ಯ, ಹೂಣರೆಲ್ಲ ಬೆರೆತು-ಹಿಂದುವಿನೊಡನೆ ಸಮ ರಸರಾಗಿ ಮಾನವ ಪ್ರೇಮಕ್ಕೆ ಕಾಣಿಕೆ ತೆತ್ತಿದಾದರೆ. ಆದುದರಿಂದ ನೀನು ಹಿಂದುವಲ್ಲದವಳೊಡನೆ ಲಗ್ನವಾಗುವದಾದರೂ ನನ್ನ ಒಪ್ಪಿಗೆ ಇದೆ. ಗರ್ವ ದಿಂದ ತನ್ನ ಮಗಳನ್ನು ಕೊಡದಿದ್ದ ಅಶೋಕ ಕುಮಾರರೊಡನೆ ಯಾವ ಸಂಬಂಧವೂ ಬೇಡ, ಉಳಿದುದೆಲ್ಲ ಕ್ಷೇಮ.

ಇತಿ ನಿನ್ನ ತಾಯಿ"

ಓದಿದ ನಂತರ ತಾಯಿಯು "ಕಲೆಯ ತಂದೆಗೆ ಅಭಿಮಾನವಿದ್ದುದ ರಿಂದಲೇ ಕಲೆಯನ್ನು ಕೊಡಲು ಒಪ್ಪುವದಿಲ್ಲವೇ ?

"ಹಾಗೆ ಕೇಳಲು ಬರದಿದ್ದರೂ ಆತ ಕೊಡುವದಿಲ್ಲ. ಬೇರೊಬ್ಬಳೊ ಡನೆ ಆತನ ಪ್ರೀತಿಯಿದೆಯೆಂಬುದೇ ಕಾರಣವಿರಬಹುದು."

"ಹೀಗಿದ್ದರೆ ಆತನು ನನಗೆ ಪತ್ರವನ್ನೇಕೆ ಬರೆದಿರಬಹುದು ?"

"ಆಕೆಯೂ ಲಗ್ನವಾಗಲು ಒಲ್ಲೆನೆಂದಿರಬೇಕು"

"ಯಾಕೆ ?"

"ವ್ರಜೇಶನು ಕಲೆಯೊಡನೆ ಲಗ್ನವಾಗುವನೆಂಬ ಸುದ್ದಿ ಆತನ ಕಿವಿಗೆ ಬಿದ್ದಿರಬೇಕು. !

"ಕಲೆಯಾದರೂ ಒಪ್ಪಬಹುದಲ್ಲವೇ ? ನೀನು ಆಕೆಯ ಗೆಳತಿ. ನಾನಾ ದರೂ ವ್ರಜೇಶನಿಗೆ ಕಲೆಯನ್ನೇ ವಿವಾಹವಾಗಲು ಒತ್ತಾಯ ಮಾಡುತ್ತೇನೆ. ಬೇಕಾದರೆ ಅವನಿದ್ದಲ್ಲಿ ಸಹ ಹೋಗಿ ಬರುವೆ."

" ನಿನ್ನ ಮಾತನ್ನು ಆತ ನಂಬುವದಾದರೂ ಹೇಗೆ ? ಅನೇಕ ವರ್ಷಗಳಿಂದ ಆತ ಅವಳಲ್ಲಿ ಅನುರಕ್ತನಾಗಿದ್ದಾನೆ. ಹೀಗಿದ್ದೂ ಅದರ ಬಗ್ಗೆ ನಿನಗೊಂದು ಮಾತು ಸಹ ತಿಳಿಸಲಿಲ್ಲವೇಕೆ ?"

" ನನ್ನ ಮಗನು ಹೀಗೆ ಮಾಡುವನೆಂದು ಎಣಿಸಿರಲಿಲ್ಲ. ಆದುದಾಗಲಿ. ನಾನೂ ನೀನೂ ಜೊತೆಯಾಗಿಯೇ ಒಮ್ಮೆ ಅವನಿದ್ದಲ್ಲಿಗೆ ಹೋಗಿ ಬರೋಣ."

" ಆದರೆ ಅಮ್ಮ ನೀವು ಕೆಲದಿನ ತಡೆಯಬೇಕಾದೀತು. ನಮ್ಮ ಪತ್ರಿಕೆಯ ಸಲುವಾಗಿ ತುಸು ಹೆಚ್ಚು ಕೆಲಸ ಮಾಡ ಬೇಕಾಗುತ್ತಿದೆ."

" ಅಡ್ಡಿ ಇಲ್ಲ. ನಿನಗೆ ಅನುಕೂಲವಾದಾಗ ಹೋಗೋಣವಂತೆ."

೧೩

ಕೆಲವು ದಿನಗಳಲ್ಲಿಯೇ ವ್ರಜೇಶನ ತಾಯಿ ಹಾಗು ಉಮೆ, ವ್ರಜೇಶನಿದ್ದಲ್ಲಿಗೆ ಬಂದರು. ಬರುವಾಗ ಉಮೆಯು ತಾಯಿಯ ಹೆಸರಿನಿಂದ ಬರೆಯಿಸಿದ ಪತ್ರವನ್ನೂ ತಂದಿದ್ದಳು. ಒಂದು ದಿನ ಅದನ್ನು ತೆಗೆದುಕೊಂಡು ವ್ರಜೇಶನು ಬಾಲೆಯನ್ನು ಭೆಟ್ಟಿಯಾದನು.

" ತಾವು ಕಲೆಯನ್ನು ಹೇಗಾದರೂ ಮಾಡಿ ಇಲ್ಲೊಮ್ಮೆ ಕರೆಯಿಸಲಾರಿರಾ ?"

" ಅದೇನು ಅಶಕ್ಯವಿಲ್ಲ."

" ಹಾಗಾದರೆ ಆಕೆಯನ್ನು ಬೇಗ ಕರಿಸಿರಿ, ಇಷ್ಟೇ ಅಲ್ಲ, ತಂದೆ ತಾಯಿಗಳನ್ನೆಲ್ಲ ಕರೆದುಕೊಂಡೇ ಬರಲಿ"

" ಅದರಿಂದೇನು ಲಾಭವಾದೀತು"

" ಅದೆಲ್ಲ ನಿಮಗೇಕೆ? ಆಕೆಯನ್ನೊಮ್ಮೆ ಕರೆಯಿಸಿ."

" ಸುಮ್ಮನೆ ಕರೆಯಿಸುವೆದರಿಂದೇನು ? ತುಸುವಾದರೂ ಪ್ರಯೋಜನವಾಗು......."

" ಕಲೆಯೊಡನೆ ನಿಮ್ಮ ಲಗ್ನವಾದೀತು"

" ಇಷ್ಟು ಬೇಗ ಸಫಲವಾಗುವಂತಿದರೆ ತಾರಿದಿಂದಲೇ ಲಗ್ನವಾಗುತ್ತೇನಲ್ಲ !"

" ಇಂದಿನ ವೈಜ್ಞಾನಿಕ ಯುಗದಲ್ಲಿ ಅವೇನು ಅಸಂಭವವೆಂದು ಹೇಳಲು ಬಾರದು. ಇಲ್ಲಿ ಉಮೆಯನ್ನಾದರೂ ಕರೆಯಿಸಿ ನೋಡೋಣ."

" ಇಲ್ಲ. ನೀನೇ ತಾಯಿಯಿದ್ದಲ್ಲಿಗೆ.

“ ಉಹುಂ ”

“ ಹೂಂ. ” ಹೋಗೋಣಂತೆ. ”

“ ಇಲ್ಲ. ”

“ ನಿನ್ನ ಹೇಳಿಕೆಯಂತೇ ಆಗಲಿ. ಕರೆದುಕೊಂಡೇ ಬರುತ್ತೇನೆಂದು ಹೇಳಿಹೋದ ಕೆಲಹೊತ್ತಿನಲ್ಲಿಯೇ ಮೋಟರಿನ ಮೇಲೆ ತಿರುಗಿಬಂದ. ಇಬ್ಬರು ಮಹಿಳೆಯರೂ ಜೊತೆಗಿದ್ದರು. ಬಾಲೆಯು ಕೂಡಲೇ ತಾಯಿಯ ಪಾದದ ಬಳಿ ಮಸ್ತಕವನ್ನಿಟ್ಟಳು.

“ ಮಗು ದೇವರು ನಿನ್ನ ಇಚ್ಛೆಯನ್ನೆಲ್ಲ ಸಫಲಮಾಡಲೆಂದು ಹರಸುತ್ತೇನೆ ”

“ ನನ್ನ ಇಚ್ಛೆ ಪೂರ್ಣವಾಗುವುದು ನಿಮ್ಮ ಕೈಯಲ್ಲಿಯೇ ಇದೆ. ಕಲಿಯೊಡನೆ ವಿವಾಹವಾದಲ್ಲಿ ನಿಮಗೂ ಸುಖವಾದೀತು. ವ್ರಜೇಶ ರಾಯರಿಗೂ ಸುಖವಾದೀತು. ನಿಮಗೂ ಇಲ್ಲದ ತೊಂದರೆ ತಪ್ಪೀತು ”

ತಾಯಿಗೆ ಬಾಲೆಯು ನಮಸ್ಕಾರಮಾಡಿದುದನ್ನು ನೋಡಿ ಉಮೆಯು ಬಾಲೆಯ ನಿರ್ಲಜ್ಜತನವನ್ನು ಕಂಡು ಉದಾಸೀನಳಾಗಿದ್ದಳು. ವ್ರಜೇಶನನ್ನು ಲಗ್ನವಾಗುವದಕ್ಕಾಗಿಯೇ ಈ ವಿನಯವೆಂದು ಆಕೆ ಭಾವಿಸಿದ್ದಳು. ಆದರೆ ಆಕೆಯ ಮಾತುಕೇಳಿ-ಆಕೆಯ ಕಣ್ಣಿನಿಂದ ನೀರ ಹನಿಗಳುದುರಿದವು. “ಇದೆಂತಹ ಪ್ರೇಮ! ಎಂತಹ ಉಚ್ಚ ತ್ಯಾಗ!”

ಆದರೆ ತಾಯಿ ಇನ್ನೊಂದು ರೀತಿಯಾಗಿ ಭಾವಿಸಿದಳು. ಆಕೆಯ ವಿನಯವನ್ನು ಕಂಡು ತನಗೆ ಯೋಗ್ಯಸೊಸೆಯೆಂದು ಕಲ್ಪಿಸಿ ಹರುಷಪಟ್ಟುಕೊಳ್ಳುವಷ್ಟರಲ್ಲಿಯೇ “ ಕಲಿಯೊಡನೆ ಲಗ್ನಮಾಡಿರಿ “ಎಂಬ ಉತ್ತರ ಕೇಳಿ ಆಕೆಯ ಮೋರೆ ಬಿಳುಪೇರಿತು.

ಕೆಲಹೊತ್ತು ಯಾರೂ ಮಾತಾಡಲಿಲ್ಲ. ಕೊನೆಗೆ ಉಮೆಯೇ “ನಮ್ಮಗೆಳೆಯರು ಎಲ್ಲ ರೀತಿಯಿಂಲೂ ಸೌಖ್ಯವಾಗಿರಬೇಕೆಂದು ಮನಸ್ಸು ಬಯಸುತ್ತಿದೆ. ಆದುದರಿಂದ ಅವರ ಕ್ಷಣಿಕ ಸೌಖ್ಯದ ಕಡೆಗೆ ವಿಶೇಷ ಗಮನ ಕೊಡದೆ, ಚಿರಕಾಲ ಸೌಖ್ಯವಾಗಿರುವಂತೆ ಯತ್ನಿಸುವುದು ಆದ್ಯ ಕರ್ತವ್ಯವಾಗಿದೆ” ಎಂದಳು.

ಬಾಲೆಯ ಮುಖ ಸಂಕೋಚದಿಂದ ಕೆಂಪಾಯಿತು. ಆಕೆ ಮೋರೆಯನ್ನು ಕೆಳಗಿಳಿಸಿದಳು. ತಾಯಿಗೊಂದು ಹೊಸಬೆಳಕು ಕಂಡಂತಾಗಿ ಹೊಸ ಜೀವ ಬಂದಿತು. ಮಾತಾಡಲು ಕುತ್ತಿಗೆಯ ಸಿರಗಳು ಉಬ್ಬಿ ಬಂದವು.

೧೪

ಜಿತೇಂದ್ರನಿಗೆ ತಾಯಿ ತಂದೆ ಇರಲಿಲ್ಲ. ಇದ್ದವನೊಬ್ಬನೇ ಅಣ್ಣ. ಆತ ರೇಲ್ವೆಯಲ್ಲಿ ಕೆಲಸದ ಮೇಲಿದ್ದ. ತಿಂಗಳಿಗೆ ಸುಮಾರು ೩೦೦ ರಷ್ಟು ಪಗಾರು ಬರುತ್ತಿತ್ತು. ಆಧ್ಯಾತ್ಮಿಕ ವಿಷಯದಲ್ಲಿ ಆತನಿಗೆ ಅಭಿರುಚಿ ಹೆಚ್ಚು. ಅದಕ್ಕಾಗಿಯೇ ಆತ ಇನ್ನೂ ತನಗೆ ಲಗ್ನವಾಗಿರಲಿಲ್ಲ; ತಮ್ಮನಿಗೂ ಲಗ್ನಕ್ಕಾಗಿ ಒತ್ತಾಯವನ್ನು ಮಾಡಲಿಲ್ಲ. ತಮ್ಮನು ಸೇವಾಸಂಘದಲ್ಲಿ ಸೇರಿದ್ದರೂ ಅದರ ವಿರೋಧ ಮಾಡಿರಲಿಲ್ಲ. ಆತನಿಗೀಗ ೩೦-೩೧ ವರ್ಷ ಪ್ರಾಯ. ಜಿತೇಂದ್ರ ಅವನಿಗಿಂತ ಮೂರು ವರ್ಷಕ್ಕೆ ಕಿರಿಯ.

ಈಗ ಐದು ವರ್ಷಗಳಾದರೂ ತಮ್ಮ ಅಣ್ಣನಿದ್ದಲ್ಲಿಗೆ ಹೋಗಿರಲಿಲ್ಲ. ವರ್ಷದಲ್ಲೆರಡು ಮೂರು ಬಾರಿ ಅಣ್ಣನೇ ತಮ್ಮನಿದ್ದಲ್ಲಿಗೆ ಬಂದುಬಂದೆರಡು ದಿನ ಉಳಿದು ಹೋಗುತ್ತಿದ್ದ. ಲಖನೌದಲ್ಲಿಯ "ರಾಮತೀರ್ಥ ಪ್ರಕಾಶನದ ಎಲ್ಲ ಪುಸ್ತಕಗಳ ಗ್ರಾಹಕನಾಗಿದ್ದ. ಆದರೂ ಆತ ಕರ್ಮಯೋಗಿಯಲ್ಲ; ಜ್ಞಾನವೇ ಮೋಕ್ಷದ ಸಾಧನವೆಂದು ತಿಳಿದಾತ. ಅದಕ್ಕಾಗಿಯೇ ಕರ್ಮಯೋಗಿಯಿಂದ ಜಿತೇಂದ್ರನಿಗೆ ಆತನಲ್ಲಿ ಸಾಕಷ್ಟು ಶ್ರದ್ಧೆಯಿರದಿರಬೇಕು. ರೇಲ್ವೆಯಲ್ಲಿ ನೌಕರಿ ಮಾಡುತ್ತ, ಕೈಯಿಂದ ಸಾರ್ವಜನಿಕ ಸೇವೆಯನ್ನೂ ಮಾಡದೆ ದರ್ಶನ ಶಾಸ್ತ್ರದ ದೊಡ್ಡ ದೊಡ್ಡ ಮಾತನ್ನು ಹೇಳುವುದು ಜಿತೇಂದ್ರನಿಗೆ ಸಮಂಜಸವೆನಿಸಿರಲಿಲ್ಲ.

ಒಮ್ಮೆ ನಸುಕಿನಲ್ಲಿಯೇ ಜಿತೇಂದ್ರ ಅವನಿದ್ದಲ್ಲಿಗೆ ಬಂದ, ಕುಶಲಪ್ರಶ್ನೆಯಾದ ಬಳಿಕ ವಿವಾಹದ ಸಲುವಾಗಿ ಅನುಮತಿ ಪಡೆಯಲು ಬಂದಿರುವೆನೆಂದು ಹೇಳಿದ.

" ಯಾರನ್ನು ಲಗ್ನವಾಗಲು ನಿಶ್ಚಯಿಸಿರುವೆ "

"ಅವಳ ಹೆಸರು ಕಲಾ, ಆಕೆಯ ತಂದೆ ಇಲ್ಲಿಯೇ ಸುಪರಿಂಟೆಂಡೆಂಟ್ ಇದ್ದಾನಂತೆ "

"ಅವಳ ಕತೆಯನ್ನೆಲ್ಲ ಬಲ್ಲೆ. ಬೇರೆ ಮತಸ್ಥಳೊಬ್ಬಳನ್ನು ಪ್ರೀತಿಸುತ್ತಿದ್ದ ಡಾಕ್ಟರ ನೊಡನೆ ವಿವಾಹವಾಗುವದಿತ್ತು"

"ಆಹುದು ಆದರೆ ನಿಮಗಲ್ಲಿಯು ಮತ-ಧರ್ಮಗಳ ಭೇದ? ತಾವಂತೂ ಬ್ರಹ್ಮವಾದಿಗಳು."

"ಮುಕ್ತಿಗಾಗಿ ಜ್ಞಾನ ಆದರೆ ಇಲ್ಲಿರುವಷ್ಟು ದಿನ ಲೋಕ ವ್ಯವಹಾರದಂತೆ ನಡೆಯಲೇಬೇಕು. ಇಲ್ಲವಾದಲ್ಲಿ ವರ್ಣಸಂಕರವಾದೀತು"

"ಹಾಗೆ ಜಾತಿ ಧರ್ಮಗಳು ನಷ್ಟವಾದರೂ ಹಾನಿಯೇನು? ಈಗ ಜಾತಿಯಿಲ್ಲವೆಂದು ತಿಳಿಯುವ ದೇಶಗಳೇ ಪ್ರಗತಿಹೊಂದಿವೆಯಲ್ಲವೇ?"

"ಅವರಲ್ಲಿದ್ದುದು ಒಂದೇ ಜಾತಿ! ಶೂದ್ರವರ್ಣ"

"ಹೇಗೆ ಹೇಳುವಿರಿ! ಇಲ್ಲಿ ವಿದ್ವಾಸ್‍ರೆಂದೆನಿಸಿ ಕೊಳ್ಳುವವರಿಗೆಲ್ಲ ಅಲ್ಲಿಯದೇ ಡಿಗ್ರಿಬೇಕು. ಎಲ್ಲ ದೃಷ್ಟಿಯಿಂದಲೂ ಅಭಿಮಾನದ ಹೊರತು ಇನ್ನೇನೂ ನಮ್ಮ ಹತ್ತಿರ ಉಳಿದಿಲ್ಲ"

"ನಾವು ಆತ್ಮವಿಸ್ವಾಸ ಕಳೆದು ಕೊಂಡಿದ್ದೇವೆ. ಆದರೂ ನಮ್ಮಿಂದ ಪರಕೀಯರು ಕಲಿಯಬೇಕಾದ ಅಂಶ ಬಹಳವಿದೆ"

"ಈ ಮಿಥ್ಯಾ ಅಭಿಮಾನ ಹೋದ ಹೊರತು ದೇಶದ ಕಲ್ಯಾಣವಾಗಲಾರದು. ಕೇವಲ ಆತ್ಮವಿಶ್ವಾಸವೊಂದಿದ್ದರೆ ಯಾಂತ್ರಿಕ ಶೋಧಗಳನ್ನೆಲ್ಲ ನಮ್ಮಿಂದ ತಾವೇ ತಯಾರಿಸಬಲ್ಲೆವೇ? ಅದಕ್ಕೆ ಶಿಕ್ಷಣ ಬೇಡವೆ?"

"ನನ್ನ ಅಭಿಪ್ರಾಯ ಹಾಗಲ್ಲ; ಅವುಗಳನ್ನು ಕಲಿತು ಆಗುವ ಪ್ರಯೋಜನವೇನಿಲ್ಲ; ಅವೆಲ್ಲ ಮಕ್ಕಳ ಆಟಿಕೆಗಳು, ನಮ್ಮಿಂದಲೇ ಪರಕೀಯರು ಇನ್ನೂ ಕಲಿಯ ಬೇಕಾದದ್ದು ಬಹಳವಿದೆ"

"ಅಣ್ಣಾ, ಇದು ಮಿಥ್ಯಾಭಿಮಾನ. ನಾವು ಆಟಿಕೆಯೆಂದು ತಿಳಿಯುತ್ತಿರುವ ವಸ್ತುಗಳಿಗಾಗಿ ಸಂಶೋಧಕರೆಷ್ಟು ಕಷ್ಟಪಟ್ಟಿದ್ದಾರೆಂದು ಅರಿಯಿರಾ? ಇದರಿಂದಾಗಿ ಜಗತ್ತೇ ಒಂದು ಕುಟುಂಬದಂತೆ ಹತ್ತಿರತ್ತಿರಕ್ಕೆ ಬರಹತ್ತಿದ್ದೇವೆ."

"ಹೀಗೆ ಮಾಡಿದುದು ನಿಜವಾಗಿದ್ದರೆ ನಾನವರನ್ನು ಅಭಿನಂದಿಸುತ್ತಿದ್ದೆ. ಯಾಂತ್ರಿಕ ಪ್ರಗತಿಯಿಂದಲೇ ನಿರಂತರ ಯುದ್ಧ; ಕ್ಲೇಶ! ನಿಜವಾದ ಶಾಂತಿ ಬೇಕಾಗಿದ್ದರೆ ಪೌರ್ವಾತ್ಯ ದೇಶಗಳಿಗೇ ಶರಣು ಬರಬೇಕು."

" ಮೊದಲಾದರೂ ಹೊಡೆದಾಟವಿರಲಿಲ್ಲವೇ ? ಶಾಂತಿಯೆಂಬುದ್ದು ಕೋಶದಲ್ಲಿ ಸಿಗುವ ವಸ್ತುಮಾತ್ರ. ಪಾಶ್ಚಿಮಾತ್ಯರು ಮಾಡಿದ ಕೆಲಸ ಅಪೂರ್ಣವಿದೆ. ನಾವೆಲ್ಲರೊಂದಾಗಿ ಅದನ್ನೇ ಪೂರ್ಣತೆಗೆ ಮುಟ್ಟಿಸೋಣ."

" ಇರಲಿ. ನೀನು ಕಲೆಯೊಡನೆ ವಿವಾಹವಾಗಬಯಸುತ್ತೀಯಷ್ಟೇ! ನಿನಗೆ ಸಿಗುತ್ತಿರುವುದು ಕೇವಲ ೧೦೦–೧೫೦ ಮಾತ್ರ. ಅಂದಬಳಿಕ ಕಲೆಯ ತಂದೆಗೆ ನಿನ್ನಂತಹ ಕಡಿಮೆ ಪಗಾರದವನಿಗೆಂದಾದರೂ ಮಗಳನ್ನು ಕೊಟ್ಟಾನೆಯೋ ?"

" ನಾನೇ ಯತ್ನಿಸಿ ನೋಡುವೆ."

" ಇದೆಂತಹ ಮಾತಪ್ಪ! ಹೆಣ್ಣಿನಲ್ಲಿಗೆ ಎಡತಾಕುವೆಯಾ ?"

" ಯಾರಾದರೂ ಎಡತಾಕಲೆ ಬೇಕಷ್ಟೇ! ಹೆಣ್ಣು ಹುಟ್ಟಿಸಿಕೊಂಡಾತ ಮನೆಮನೆ ತಿರುಗಬೇಕಾಗುತ್ತಿತ್ತು. ಈಗ ನಾನು ಹೋದಲ್ಲಿ ತಪ್ಪೇನು ?"

" ಹಾಗಾದರೆ ಹಾಗೆ. ಹೀಗೆ ಪ್ರಾರ್ಥಿಸಲು ಎಂದು ಹೋಗುವಿ ?"

" ಇಂದೇ ಹೋಗುವ ವಿಚಾರವಿದೆ."

" ನಾನೇ ಮಾತಾಡಿ ನೋಡಲೇ ?"

" ನೀನೇ ವಿವಾಹವಾಗುವಂತಿದ್ದರೆ ತುಂಬ ಸಂತೋಷ"

" ಹುಚ್ಚು–ಗಿಚ್ಚು ಹಿಡಿದಿಲ್ಲವಷ್ಟೇ! ನಾನು ನಿನಗಾಗಿಯೇ ಹೆಣ್ಣು ಕೇಳಲು ಹೊರಟಿದ್ದು. ಆದರೆ ಆ ಹುಡುಗಿಯೊಡನೆ ನಿನಗೆ ಪ್ರೇಮವಿಲ್ಲೆಂದು ಸ್ಪಷ್ಟವಾಗಿ ಬಲ್ಲೆ. ಆಕೆಯನ್ನು ಯಾರಾದರೂ ಲಗ್ನವಾದರೆ ಸಾಕೆಂದು ನೀನು ಮುಂದಾಗುತ್ತಿರುವಿ. ಅಲ್ಲವೇ ?"

" ನೀವು ಕಲೆಯನ್ನು ನೋಡಿರುವಿರಾ ? ಅವಳ ಬಗ್ಗೆ ಏನಾದರೂ ಗೊತ್ತಿದೆಯೋ ?"

" ಇಲ್ಲ. ಅವಳ ಬಗ್ಗೆ ಗೊತ್ತಿದ್ದದ್ದೂ ಅಷ್ಟಕಷ್ಟೇ ? ಹೆಸರಿನಿಂದ, ಕಲೆಯಲ್ಲಿ ಪ್ರಗತಿತೋರಿರ ಬೇಕೆಂದು ಅನಿಸುತ್ತಿದೆ. ಅವಳ ತಂದೆಯೊಮ್ಮೆ ಆಕೆ ತೆಗೆದ ಒಂದೆರಡು ಚಿತ್ರ, ಕವಿತೆ ತೋರಿಸಿದ್ದ."

" ಯಾಕೆ ?"

" ಅವಳಿಗೆಲ್ಲಿಯಾದರೂ ಗಂಡನನ್ನು ಹುಡುಕಲು ನನ್ನಿಂದ ನೆರವಾ

ದೀತೆಂದು ತಿಳಿದಿದ್ದ." ಅವೆಲ್ಲ ಇರಲಿ, ಈಗ ನೀನು ಮದುವೆಯಾಗಲು ತವಕಿಸುತ್ತಿರುವುದೇಕೆ ?"

"ಕಲೆಯಲ್ಲಿ ಕವಿತ್ವ ಶಕ್ತಿಯಿದೆಯೆಂದು ಕೇಳಿರುವೆ. ನನ್ನಲ್ಲಿ ಕರ್ಮ ಶಕ್ತಿ ಇದೆ. ಇವೆರಡು ಒಂದೆಡೆ ಕೂಡಿದಲ್ಲಿ ನಾಡಿಗೆ ಹೆಚ್ಚಿನ ಸೇವೆ ಸಲ್ಲಿಸ ಬಹುದೆಂದು ಭಾವಿಸಿದ್ದೇನೆ."

"ಹೆಚ್ಚಿನ ಸೇವೆಯೆಂದರೆ ಮಕ್ಕಳ ಸೇವೆಯೇ ಆಗಬಹುದು ಇರಲಿ. ನಡೆದ ಸಂಗತಿಯಾದರೂ ಏನು ? ಸ್ಪಷ್ಟವಾಗಿ ಹೇಳಬಾರದೇ ? " ಅವಳನ್ನೇ ಮದುವೆಯಾಗಬೇಕೆಂಬ ಬುದ್ಧಿಯಾದರೂ ಹೇಗೆ ಹುಟ್ಟಿತು ?"

"ಮೊದಲು ಪ್ರೇಮಿಸಿ ಮದುವೆಮಾಡಿ ಕೊಳ್ಳುವ ರೀತಿಯಾವುದೂ ಹಿಂದೂ ಧರ್ಮದಲ್ಲಿಲ್ಲ. ವಿವಾಹವಾದ ನಂತರವೇ ಪ್ರೇಮ! ಅಂದಬಳಿಕ ಕಲೆ ಯೊಡನೆ ಪ್ರೇಮಿಸಿಯೇ ನಾನಿದಕ್ಕೆ ಸಮ್ಮತಿಸಿದ್ದೇನೆಂದು ಹೇಗೆ ಹೇಳಲಿ "

ಉಪೇಂದ್ರ ಯೋಚನಾಮಗ್ನನಾದ.

೧೬

ಉಪೇಂದ್ರ ಹಾಗೂ ಅಶೋಕಕುಮಾರರು ಈ ವಿಷಯವನ್ನು ಚರ್ಚಿ ಸಿದರು. ಅದರಫಲವಾಗಿ ಉಮಾ, ಗಿರೀಶರಿಗೆ ಕೂಡಲೇ ಹೊರಟುಬ ರಲು ತಾರುಬಂದಿತು.

ಝಾನ್ಸಿಗೆ ಬಂದವಳೇ ಉಮೆಯು ನೇರವಾಗಿ ಕಲೆಯ ಮನೆಗೆ ಬಂದಳು. ನನ್ನನ್ನೀಗ ಕರೆಯಿಸಿಕೊಂಡ ಕಾರಣವೇನೆಂದು ಕೇಳಿದಳು.

"ಜಿತೇಂದ್ರನ ವಿಚಾರವೇನೆಂದು ತಿಳಿಯಲು ನನ್ನ ತಾಯಿ ಹಾಗೂ ತಂದೆ ಆತುರರಾಗಿದ್ದಾರೆ. ಈತನ ರಹಸ್ಯವನ್ನರಿತು ತಿಳಿಸುವವಳು ನಿನ್ನ ಹೊರತು ಇನ್ನಾರೂ ಇಲ್ಲವೆಂದು ನನ್ನ ತಾಯಿತಂದೆಗಳಿಬ್ಬರೂ ಅಭಿಪ್ರಾಯ ಪಟ್ಟಿದ್ದಾರೆ."

"ಹಾಗಾದರೆ ನಿನ್ನ ಅಭಿಪ್ರಾಯವೇನು ?"

"ನಾನು ಪರೀಕ್ಷಕಳು."

"ನನ್ನ ಮೇಲೆ ನಿನ್ನ ಒತ್ತಾಯ ಹೇಗೆ ತಾನೇ ನಡೆದೀತು ? ಇರಲಿ. ಜಿತೇಂದ್ರನ ಕೋರಿಕೆಯಾದರೂ ಏನಿದೆ ?"

" ನನ್ನನ್ನು ಬಿಟ್ಟು ಇರಲಾರನಂತೆ. ನಾನು ಮದುವೆಯಾಗಲು ಒಲ್ಲೆ ನೆಂದರೆ ಮದುವೆಯಾಗುವದೇ ಇಲ್ಲನಂತೆ ಆದರೆ ಅವರ ಅಣ್ಣ 'ಸ್ತ್ರೀಯೆಂದರೆ ಮಾಯೆ. ಮದುವೆಯಾದರೆ ಆತ್ಮಸಾಕ್ಷಾತ್ಕಾರವಾಗುವದಿಲ್ಲ. ಬಂಧನದಲ್ಲಿ ಬಿದ್ದಂತೆಯೇಸರಿ' ಎಂದು ಮುಂತಾಗಿ ಉಪದೇಶಮಾಡಿದ. ಆದರೆ ಜಿತೇಂದ್ರ ಅದಾವುದಕ್ಕೂ ಕಿವಿಗೊಡದ್ದರಿಂದ ಅವರ ಅಣ್ಣ ತಾನಾಗಿಯೇ ತಂದೆಯ ಹತ್ತಿರ ಈ ಪ್ರಸ್ತಾಪ ತೆಗೆದ."

" ಅವರ ಅಣ್ಣನದೂ ಮದುವೆಯಾಗಿಲ್ಲವಷ್ಟೇ ?"

" ಹೌದು. ಅವನು ಅವಿವಾಹಿತನಾಗಿಯೇ ಉಳಿಯುವನು. ಬರುವ ಮುನ್ನೂರು ರೂಪಾಯಿಯಲ್ಲಿ ನೂರಿನ್ನೂರು ಸಾಧುಸಂನ್ಯಾಸಿಗಳ ಪಾಲಾಗುತ್ತಿದೆ. ತಮ್ಮನೂ ಹೀಗೆ ಆಗಬೇಕೆಂದು ಅವನ ಇಚ್ಛೆ."

" ಹಾಗಾದರೆ ನಿನಗೆ ಬೇಕಾದುದೇನು ?"

" ಅಂದರೆ ? ನೀನೇನನ್ನು ಬಯಸುತ್ತೀಯೆ ?"

" ನಮಗೆ ಜೀವನದಲ್ಲಿ ಆವಶ್ಯಕ ವಸ್ತುಗಳನ್ನು ದೊರಕಿಸಲು ಧನ, ಪ್ರತಿಷ್ಠೆ, ಪತಿ, ಸೇವಕರುಬೇಕು. ಶರೀರಕ್ಕೆ ಅನ್ನವಸ್ತ್ರ, ಮಾನಸಿಕ ಸೌಖ್ಯಕ್ಕಾಗಿ ಪುಸ್ತಕ, ಮಕ್ಕಳ ಮೋಹ ಕುಲವರ್ಧನಕ್ಕಾಗಿ ಮಕ್ಕಳುಬೇಕು. ಸೇವಕರಿಂದ ನಮ್ಮ ಶ್ರೇಯಸ್ಸು ಬೆಳೆಯುವದಕ್ಕೆ ಸಾಧನವಾಗುತ್ತಿದೆ. ಯೋಗ್ಯರೀತಿಯಿಂದ ಆನಂದೋಪಭೋಗ ಹಾಗೂ ಜ್ಞಾನದ ಪ್ರಚಾರವೇ ಮಾನವ ಜೀವನದ ವೈಶಿಷ್ಟ್ಯವಾಗಿದೆ. ಹಾಗಾದರೆ ನಿನಗೇನುಬೇಕು."

" ತುಲಸೀದಾಸರಂತಹ ವಿದ್ವಾಂಸರೆಲ್ಲ ಪತಿಯೆಂದರೆ ---

" ಅವರ ಅಭಿಪ್ರಾಯವನ್ನು ನಂಬಿ ನಿನ್ನ ಜೀವನವನ್ನು ಹಾಳುಮಾಡಿಕೊಳ್ಳಬೇಡ. ಗಂಡ ಹಾರುಡನಿರಲಿ, ಕುಂಟನಿರಲಿ, ವ್ಯಭಿಚಾರಿ ಇರಲಿ-ಅವನನ್ನು ಮನ್ನಿಸಬೇಕೆಂದು ಅವರ ತತ್ವ! ಆತ್ಮ ಸಮರ್ಪಣೆಯ ದಾರಿಯದು. ಬ್ರಾಹ್ಮಣರಬಗ್ಗೂ, ಗುರುಹಿರಿಯರಬಗ್ಗೂ ಅವರ ಅಭಿಪ್ರಾಯವಿದೇರೀತಿಯದಿದೆ. ನೀನು ಹೀಗೆ ಮಾಡಲು ಸಿದ್ಧಳಿರುವೆಯಾ ?"

" ಈಗ ಯಾರೂ ಹೀಗೆ ಆಚರಿಸಲಾರರು "

" ಹಾಗಾದರೆ ಯಾರನ್ನು ನೀನು ಮೆಚ್ಚುತ್ತೀಯೆ ?"

" ಇದನ್ನು ಕೇಳಿದರೆ ನಿನ್ನ ಸಲಹೆ ಪಡೆಯಬೇಕಾದುದೇನಿದೆ ?"

" ಇಲ್ಲ, ನನ್ನ ಸಲುವಾಗಿಯೇ ಕೇಳಿಕೊಂಡೆ "

" ನಾನು ಬಿಟ್ಟವನನ್ನು ನೀನು ಆರಿಸಬೇಕೆಂದು ಮಾಡಿರುವೆಯಾ ? "

" ನನ್ನ ಕೈಯ್ಯಿಂದ ಪೆಟ್ಟು ತಿನ್ನುವ ಮನಸ್ಸಾಗಿರಬೇಕೆಂದು ತೋರುತ್ತಿದೆ. "

" ಅದನ್ನೇನು ತಿನ್ನುವ ಬಯಕೆಯಿಲ್ಲ. ತಿನ್ನಲಿಕ್ಕೇನಾದರೂ ಕೊಟ್ಟರೆ ತಿನ್ನುವೆ. "

" ತಮಾಷೆಯಲ್ಲ ಇರಲಿ. ಇವರಲ್ಲಿ ಯಾರೊಡನೆಯಾದರೂ ಲಗ್ನವಾಗಲು ಬಯಸುವಿಯಾ ? "

" ಇಲ್ಲ "

" ಯಾಕೆ ? "

" ಇದರಿಂದ ಜಿತೇಂದ್ರನ ಶ್ರೀಮಂತಿಕೆಗೆ ಕುಂದುಬರುವದು. ಅಲ್ಲದೆ ವ್ರಜೇಶನು ಕ್ಷಿಮೋನವೇಷ ಮಾಡುತ್ತ ಉಳಿತರೆ ಕೈಗೆ ಬಂದ ತಡಿತಬಾಲೆಯೂ ಸಿಗಲಿಕ್ಕಿಲ್ಲ "

" ಹಾಗಾದರೆ ನೀನೇನು ಮಾಡುವಿ ? "

" ಕಲೆಯ ಮುಖಾಂತರ ಆನಂದ ಪ್ರಾಪ್ತಿ. ಜ್ಞಾನದ ಮುಖಾಂತರವಾಗಿ ವಿವಾಹಬಂಧನ, ಆಧುನಿಕ ಧರ್ಮಬಂಧನ ಇತ್ಯಾದಿಗಳ ವಿರುದ್ಧ ಪ್ರಚಾರ "

" ಇದರಿಂದ ತಂದೆ ತಾಯಿಗಳ ಅಪಮಾನವೆನ್ನಾದೀತೆಂದಾದರೂ ಕಲ್ಪಿಸಿರುವೆಯಾ ? ".

" ಮೊದಮೊದಲು ಆಗಬಹುದು. ಆಮೇಲೆ ನನ್ನ ನಡತೆಗಳ ಪ್ರಭಾವದಿಂದ ಎಲ್ಲವೂ ಅಲ್ಲಿಂದಲ್ಲಿಗೇ ಶಾಂತವಾದೀತು. ನನ್ನ ಕೀರ್ತಿಯ ಪ್ರಸಾರವೂ ಆದೀತು "

" ಇದೊಂದು ಹುಚ್ಚು ಮಹತ್ವಾಕಾಂಕ್ಷೆ! ಹಿಂದೂ ಧರ್ಮದಂತೆ ವಿವಾಹಿತರಾದವರೆಲ್ಲ ತಲೆಯಿಲ್ಲದವರೆಂದೂ ಸೂಳೆಯರೆಂದೂ ನಿನ್ನ ಅಭಿಪ್ರಾಯವಾಗಿರುವದೇ ? "

" ಇಲ್ಲ. ಸೂಳೆಯರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲವೆಂದು ಕೇಳಿರುವೆ. ಅಂತಹರೆಲ್ಲ ಹಿಂದೂ ಗೃಹಿಣಿಯಾಗುವುದು ಸ್ವರ್ಗತುಲ್ಯವೆಂದು

ಭಾವಿಸಬಹುದು. ಆದರೂ ನನಗೇಕೋ ನನ್ನ ದಾರಿಯೇ ಹೆಚ್ಚು ಸಮಂಜಸವೆಂದು ಅನಿಸಹತ್ತಿದೆ."

"ಯಾಕೆ ? ಹಿಂದೂ ಧರ್ಮದ ನಿಯಮಗಳು ಚೆನ್ನಾಗಿಲ್ಲವೇ ?"

"ಯಾಕೆಂದರೆ ಇದೊಂದು ಪರಿವರ್ತನೆಯ ಕಾಲ. ಆಪತ್ತಿನ ಕಾಲ. ಇಂತಹ ಸಮಯದಲ್ಲಿ ಆಪದ್ಧರ್ಮಗಳನ್ನು ಪಾಲಿಸುವುದೇ ಸೂಕ್ತವೆಂದು ಅನಿಸುತ್ತಿದೆ."

"ಹಾಗಾದರೆ ಜಿತೇಂದ್ರ, ಮತ್ತು ನಿಮ್ಮಲ್ಲಿ ಅನುರೂಪತೆ ಹೆಚ್ಚಾಗಿದೆ. ಇದು ಕಠಿಣಕಾಲವೆಂದು ಬಲ್ಲೆ. ಈ ಆಪತ್ತಿಯನ್ನು ದೂರುಮಾಡುವುದಕ್ಕಾಗಿ ನಮ್ಮ ಸರ್ವಸ್ವವನ್ನೂ ಹೋಮಿಸಲು ಸಿದ್ಧರಾಗಬೇಕಾಗಿದೆ ಆದರೆ ಈ ಕಾರ್ಯಕ್ಕೆ ನಾವೆಷ್ಟರಮಟ್ಟಿಗೆ ಯೋಗ್ಯರಿದ್ದೇವೆಂದು ತೂಗಿ ನೋಡುವುದೂ ಅತ್ಯಾವಶ್ಯಕ. ಸಾಕಷ್ಟು ಯೋಗ್ಯತೆಯಿಲ್ಲದೆ ದುಡುಕುವುದು ಹಾನಿಕರ, ಅಲ್ಲದೆ ಹಿರಯರ ಕೆಲಸಕ್ಕೇ ಅಡ್ಡಬಂದಂತೆ."

"ಪರದೇಶದ ಹಿರಿಯರು ತಮ್ಮ ಮಕ್ಕಳಿಗೆ ದೇಶಕಾರ್ಯಕ್ಕಾಗಿ ಮುನ್ನುಗ್ಗಲು ಸಲಹೆಕೊಡುತ್ತಿರುವಾಗ, ನಿನ್ನಂತಹಳು ನನಗೆ ಈ ರೀತಿ ಸಲಹೆ ಕೊಡುವುದು ಉಚಿತವೇ ?"

"ಬೇರೊಬ್ಬರಿಗೆ ಸಲಹೆಕೊಡುವ ಯೋಗ್ಯತೆ ನನಗೆಲ್ಲಿಯದು ? ಗೆಳತಿಯೊಡನೆ ಸಲಿಗೆಯಿಂದ ಹೇಳಿದ ಮಾತು ಇವು. ಆದರ್ಶ ಹಿರಿಯದಾಗಿರಬೇಕು. ಆದರೆ ನಮಗೆ ನಿಲುಕುವ ಎತ್ತರದಲ್ಲಿರಬೇಕು. ಆನೆಯಾಗಿ ಕಬ್ಬುಮೇಯುವುದಕ್ಕಿಂತ ಇರುವೆಯಾಗಿ ಸಕ್ಕರೆ ಮೇಯುವುದು ವಾಸಿ. ಮೊದಲು ಒಂದೆರಡು ಸಣ್ಣ ಪುಟ್ಟ ಕಾರ್ಯಗಳನ್ನು ಮಾಡಿನೋಡು"

"ಹಾಗಾದರೆ ನಾನಿಲ್ಲಿಯ ತನಕ ಕಲಿತಿಲ್ಲವೇ? ಅಷ್ಟು ಯೋಗ್ಯ ಸಾಲದೇ ?"

"ನಾವು ಯುನಿವರ್ಸಿಟಿಗಳಿಂದ ಕಲಿತು ಬರುವದು. ಈ ದುರಹಂಕಾರದ ಹೊರತು ಇನ್ನೇನಲ್ಲ. ಕಲಿತನೆಂದೊಡನೆ ಜ್ಞಾನ ಬುದ್ಧಿಗಳ ಖಜಾನೆಯೇ ಕೈವಶವಾಗಿದೆಯೆಂದು ತಿಳಿಯಬೇಡ. ಅದಕ್ಕೆ! ಮುಟ್ಟುವ ದಾರಿಮಾತ್ರ ದೊರೆತ್ತಾದಂತೆ."

"ಹಾಗಾದರೆ ಆ ಹಾದಿಯಿಂದ ಹೋಗಲೇಬಾರದೆಂದು ನೀನು ವಿರೋಧಿಸುತ್ತಿರುವಿಯಲ್ಲ"

"ಅದರ ದಾರಿ ಬೇರೆ. ನೀನು ಹಿಡಿದುದಲ್ಲ. ಮದುವೆಯಾಗುವದೇ ಮುಖ್ಯ. ಮದುವೆಯಾಗಿ ಮನೆಯಭಾರ ನಿರ್ವಹಿಸಬಲ್ಲಿಯಾದರೆ–ಆ ಸ್ವಾನುಭವದಿಂದ ಇನ್ನೂ ಹತ್ತಾರು ಮಂದಿಯನ್ನು ಉದ್ಧಾರಮಾಡಬಲ್ಲೆ."

"ಉಹುಂ ನಾನು ಮದುವೆಯನ್ನೇ ಮಾಡಿಕೊಳ್ಳುವದಿಲ್ಲ."

"ಅಂದರೆ ವ್ರಜೇಶನೊಡನೆಯೇ ಮದುವೆಯಾಗಲು ನಿನ್ನ ಹಂಬಲ ವಿರಬೇಕು"

ಕಲಿಯು ಎದ್ದು ನಡೆದಳು. ತುಸು ತಡೆದು ಉಮೆಯೂ ಅವಳ ದಾರಿ ಹಿಡಿದಳು.

೧೭

"ನಮ್ಮಿಬ್ಬರಿಗೆ ಜಾತಿಯಾವದೋ ಗೊತ್ತಿಲ್ಲ. ನಾವೆಲ್ಲ ಬಾಳಿ ದೊಡ್ಡವರಾದುದು ಆಶ್ರಮದಲ್ಲಿ. ಆದರ ವ್ಯವಸ್ಥಾಪಕನು ಇದಾವ ನಿಯಮವನ್ನೂ ಗಣಿಸುತ್ತಿರಲಿಲ್ಲ. ನಾನೀಗ ನೌಕರಿ ಮಾಡುತ್ತಿದ್ದೇನೆ. ಆದ್ದರಿಂದ ಶೂದ್ರನೆಂದಿಷ್ಟೇ ಹೇಳಬಲ್ಲೆ."

"ಹಾಗಾದರೆ ಹತ್ತು ಹನ್ನೆರಡು ರೂಪಾಯಿ ವೇತನದ ಸಿಪಾಯಿ' ಪಟ್ಟೇವಾಲರಿಗೆಲ್ಲ ಏನನ್ನುವಿರಿ?

"ಅವರಿಗೆ ಬೇಕಾದರೆ ಇನ್ನೂ ಕೆಳತರಗತಿಯ ಶೂದ್ರರೆಂದು ಕರಿಯೋಣ. ಆದರೆ ನಾವೆಲ್ಲರೂ ಶೂದ್ರರೇ ಸರಿ."

"ಪರಾಧೀನ ಜನತೆಯಲ್ಲ ಶೂದ್ರರೇ ಸರಿ. ಅಲ್ಲದೆ ಜಗತ್ತಿನ ಯಾವ ಜಗವೂ ಕಾಮಕ್ರೋಧಾದಿ ಷಡ್ರಿಪುಗಳಿಗೆ ತುತ್ತಾಗದೆ ಹೋಗಿಲ್ಲ. ಅದರಿಂದ ಪ್ರತಿಯೊಬ್ಬನೂ ಶೂದ್ರನೇ"

"ಈಗ ನೀವೂ ಸಹ ಜಾತಿ–ಗೀತಿಗಳನ್ನೆಲ್ಲ ಮನ್ನಿಸುವದಿಲ್ಲವಷ್ಟೇ."

"ಅದಕ್ಕೊಂದು ಮಿತಿ ಇದೆ."

'ನಾವು ಆ ಮಿತಿಯಲ್ಲಿ ಸೇರುತ್ತೇವೋ ಇಲ್ಲವೋ?'

', ಹೇಗೆ ಆದರೂ ನಿಮ್ಮನ್ನು ನನ್ನ ಹತ್ತುಗಡೆಯುವರೆಂದೇ ಭಾವಿಸಲಾಡುವದು."

"ಆಶ್ರಮದಲ್ಲಿರುವ ಎಲ್ಲರಸ್ಥಿತಿಯು ಒಂದೇ. ಅವರಾರೂ ತಮ್ಮ ತಂದೆಯನ್ನರಿಯರು."

"ಮೇಲಿಂದ ಮೇಲೆ ಇಂತಹ ಮಾತನ್ನೇಕೆ ಆಡುವಿರಿ? ನಿಮ್ಮ ಬಗ್ಗೆ ಆ ಪ್ರಶ್ನೆಯೇ ಇಲ್ಲ."

"ಮೋಸಹೋದೆವೆಂದು ಪಶ್ಚಾತಾಪ ಪಡುವ ಸಂದರ್ಭ ನಿಮಗೆ ಬರಬಾರದೆಂದೇ ಎಲ್ಲವನ್ನೂ ತಿಳಿಸುತ್ತಲಿರುವೆ. ಅಲ್ಲದೆ ನಿಮ್ಮ ಆಪ್ತೇಷ್ಟರಲ್ಲಿಯೇ ಲಗ್ನವಾದರೂ ವಾಸಿ. ಯೋಗ್ಯತೆಯೇ ಮುಖ್ಯವಾದ ಜಾತಿಯೇ ಹೊರತು ಇನ್ನುಳಿದುದೆಲ್ಲವೂ ವ್ಯರ್ಥ."

"ಆದರೂ ಜನತೆಯ ಅಭಿಪ್ರಾಯಕ್ಕೆ ತುಸು ಲಕ್ಷ್ಯ ಕೊಡಲೇ ಬೇಕಾಗುತ್ತದೆ. ಇದ್ದವಳೊಬ್ಬಳೇ ಮಗಳು. ಎಷ್ಟೇ ಮಂದಿ ವಿರೋಧಿಸಿದರೂ ನನ್ನ ಮನಸ್ಸಿನಂತೆ ಆಕೆಗೆ ಶಿಕ್ಷಣ ಕೊಡಿಸಿದ್ದೇನೆ. ಇಂತಹ ಪ್ರಿಯಪುತ್ರಿ ಜೀವಮಾನದಲ್ಲೆಲ್ಲ ನಿಂದಿಸಿಕೊಳ್ಳುವಂತಾಗ ಬೇಕೆಂದು ನನ್ನ ಇಚ್ಛೆಯಿಲ್ಲ."

"ಎಷ್ಟಾದರೂ ಅವಳು ಕಲಿತವಳು. ಈ ವಿಷಯದಲ್ಲಿ ಅವಳ ಸಲಹೆಯನ್ನು ಪಡೆಯುವದೂ ಯೋಗ್ಯವಾದೀತು."

"ಜಿತೇಂದ್ರನಂತಹ ಸಮಾಜಸೇವಕನೊಡನೆ ಲಗ್ನಮಾಡಿ ಕೊಡುವುದರಿಂದ ಕೆಲದಿನ ಅಪಮಾನಕ್ಕೆ ಪಕ್ಕಾಗ ಬೇಕಾದರೂ, ಕೆಲವೇ ದಿನಗಳಲ್ಲಿ ಕೀರ್ತಿಪಾತ್ರಳಾಗಲೇ ಬೇಕಾದೀತು. ಆದರೆ ಜಿದೇಂದ್ರನು ಲಗ್ನವಾಗಲು ಇಷ್ಟೊಂದು ಆತುರ ಪಡಲು ಕಾರಣವೇನು?"

"ಬಾಲೆಯನ್ನು ಆಶ್ರಮದಲ್ಲಿ ತಂದಾಗ, ಅಣ್ಣತಂಗಿಯಂದಿರಂತೆ ಆಜನ್ಮ ಅವಿವಾಹಿತರಾಗಿ ಸಮಾಜದ ಕೆಲಸ ಮಾಡಬೇಕೆಂದು ಯೋಚಿಸಿಕೊಂಡಿದ್ದ, ಆದರೆ ಬಾಲೆಯು ವಿವಾಹದತ್ತ ಒಲೆಯುತ್ತಿದುದರಿಂದ ಈತನ ಮೇಲೆ ಅದರ ಪ್ರತಿಕ್ರಿಯೆಯಾಗಿ ತಾನೂ ವಿವಾಹವಾಗಬೇಕೆಂದು ಹೇಳುತ್ತಿದ್ದಾನೆ."

"ಹಾಗಾದರೆ ಕಲೆಯನ್ನೇ ಮದುವೆಯಾಗುತ್ತೇನೆಂಬುದರಗೂಢವೇನು?"

"ಕಲೆಯೇ ತನ್ನ ಜೀವನದ ನಿಜವಾದ ಜೊತೆಗಾತಿಯಾಗಬಹುದೆಂದು ಆತ ಭಾವಿಸಿದ್ದಾನೆ. ತನ್ನ ತಾಯಿಗೆ ಸಂತೋಷ ಪಡಿಸುವದಕ್ಕಾಗಿ ಬಾಲೆಯು

ವ್ರಜೇಶನಂತಹ ಡಾಕ್ಟರನನ್ನು ಮದುವೆಯಾಗುವದು ಯೋಗ್ಯವಾಗಿದೆ. ಅದಕ್ಕಾಗಿ ಪ್ರಜೇಶನೊಡನೆ ಕಲೆಯ ವಿವಾಹವಾಗುವಂತಿಲ್ಲ."

"ನನ್ನ ಅಭಿಪ್ರಾಯವೂ ಹಾಗೇ ಇದೆ. ವ್ರಜೇಶನಿಗೆ ಲಗ್ನ ಮಾಡಿ ಕೊಟ್ಟರೆ ಕಲೆಯ ಸಮಯವೆಲ್ಲ ಅಡಿಗೆ ಮಾಡುವದರಲ್ಲಿಯೋ, ಅತ್ತೆಯ ಸೇವೆ ಮಾಡುವುದರಲ್ಲಿಯೋ ಕಳೆದೀತು. ಇಂತಹ ಕೆಲಸಕ್ಕೆಲ್ಲ ಕಲೆಯಂತಹ ಕಲಿತವಳೇ ಬೇಕೆಂದಿಲ್ಲ. ಸಾಧಾರಣ ತರಗತಿಯ ಆಳೂ ಮಾಡಬಹುದು."

"ಆದರೆ ಆಳಿನಲ್ಲಿ ಅಂತಹ ವಾತ್ಸಲ್ಯ ವಿರುವದಿಲ್ಲ."

ಅಷ್ಟೊತ್ತಿನಲ್ಲಿಯೇ ಒಂದು ಟಾಂಗಾ ಬಾಗಿಲ ಬಳಿ ನಿಂತಿತು. ಅದರಿಂದ ವ್ರಜೇಶನಿಳಿದು ಅಶೋಕಕುಮಾರಿಗೆ "ನಿಮ್ಮೊಡನೆ ನಾನೊಂದು ಅವಶ್ಯಕವಾದ ಗುಟ್ಟಿನ ವಿಷಯ ಹೇಳಬೇಕಾದುದಿದೆ." ಎಂದ.

ಅವರಿಬ್ಬರೂ ಒಂದು ಕೋಣೆಗೆ ನಡೆದರು. ನಿಮ್ಮ ಮಗಳೊಡನೆ ವಿವಾಹವಾಗಲು ನನ್ನ ತಾಯಿ ಒಪ್ಪಿದ್ದಾಳೆ. ಇದು ಅವರದೇ ಪತ್ರ."

"ಈಗ ಅವಳು ಹೇಗೆ ಒಪ್ಪಿದಳು."

"ಇದೇ ಯೋಗ್ಯವೆಂದು ಆಕೆ ತಿಳಿದಿರಬೇಕು."

"ಆದರೆ. ಆಕೆಯನ್ನು ಜಿತೇಂದ್ರನಿಗೆ ಕೊಡಬೇಕೆಂದು ಮಾಡಿರುವೆನಲ್ಲ"

"ಅದಾಗದು. ಜಿತೇಂದ್ರನ ತಾಯಿ ಒಬ್ಬ ಭಿಕ್ಷುಕಿಯಂತೆ."

"ಯಾರು ಹೇಳಿದರು?"

"ನಮ್ಮಲ್ಲಿಯ ಜನರೆಲ್ಲರಿಗೂ ಗೊತ್ತಿದೆ."

ಒಳಗೆ ಬಂದು ಉಪೇಂದ್ರನೊಡನೆ ಅಶೋಕಕುಮಾರನು ಇದೇ ವಿಷಯವನ್ನು ಚರ್ಚಿಸಿದ.

"ನಿಜವಿದ್ದರೂ ಇರಬಹುದು. ನಾವು ಆಶ್ರಮದಲ್ಲಿ ಬೆಳೆದವರು. ನಮ್ಮ ತಾಯಿಯಾರೆಂದು ತಿಳಿದಿದ್ದರೆ ಆಕೆಯನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದೆ."

ಅಶೋಕಕುಮಾರ ಅಲ್ಲಿಂದ ಹೊರಟ. ವ್ರಜೇಶನೂ ಹಿಂಬಾಲಿಸಿದ. ನೀನು ಹಿಂಬಾಲಿಸಬೇಡವೆಂದು ಹೇಳಲು ಬಯಸಿದ. ಆದರೆ ಕಟ್ಟಿದ್ದ ತಂದೆಯ ಬಾಯಿಂದ ಮಾತೇ ಹೊರಡಲಿಲ್ಲ.

ಕಲಾ, ಉಮೆಯರಿಬ್ಬರೂ ಅನಾಥಾಲಯದತ್ತ ಹೊರಟಿದ್ದರು. ಅಲ್ಲಿ ಹೋಗಿ 'ಕರುಣಾ' ಎಂಬ ಹುಡುಗಿಯನ್ನು ಮೆಚ್ಚಿ ಮನೋಹರನೊಡನೆ "ಈಕೆಯನ್ನು ಅಶೋಕಕುಮಾರರು ದತ್ತಕತೆಗೆದುತೆಗೆದುಕೊಳ್ಳಲು ಯೋಚಿಸಿದ್ದಾರೆ. ತಮ್ಮದೇನೂ ಅಡ್ಡಿಯಿಲ್ಲವಷ್ಟೆ!" ಎಂದು ಕೇಳಿದರು.

"ಅಡ್ಡಿಯೇನಿಲ್ಲ. ಆದರೆ ನಿಮ್ಮ ಮಾತು ಕೇಳಿ ಆಶ್ಚರ್ಯವಾಗುತ್ತದೆ. ಇವಳನ್ನೇಕೆ ದತ್ತಕವನ್ನಾಗಿ ತೆಗೆದುಕೊಳ್ಳುತ್ತಾರೆ."

"ಕಲೆಯು ವಿವಾಹವಾಗಿ ಹೋಗತಕ್ಕವಳು."

"ಆದರಿಂದೇನು ?"

"ಕಲೆಗೆ ಕಲಿಸಿದಂತೆಯೇ ಇವಳನ್ನೂ ತಮ್ಮ ಖರ್ಚಿನಿಂದ ಓದಿಸತಕ್ಕವರಿದ್ದಾರೆ."

"ಆವಳ ಬಗ್ಗೆ ಹೀಗೆ ಮಾಡಲು ಕಾರಣವೇನು ? ನಮ್ಮ ಆಶ್ರಮದಿಂದ ಇನ್ನೂತನಕ ಯಾರನ್ನೂ ಹೊರಗೆ ಕೊಟ್ಟಿಲ್ಲ. ಮಕ್ಕಳಿಲ್ಲದವರು ದತ್ತಕವನ್ನಾಗಿ ತೆಗೆದುಕೊಳ್ಳುವದಾದರೆ ತಮ್ಮ ಸಂಬಂಧಿಕರಿಂದಲೇ ತೆಗೆದುಕೊಳ್ಳಬಹುದು."

"ಇವಳನ್ನೇ ತೆಗೆದುಕೊಳ್ಳಬೇಕೆಂದು ಮಾಡಿದ್ದೇವೆ." ಎಂದು ಕಲೆಯೆಂದಳು.

"ಆದರೂ ನಿಮ್ಮ ತಂದೆಯವರಿಂದ ಲೇಖೀ ಮೂಲಕ ಕರಾರಪತ್ರ ಆಗದ ಹೊರತು ಕಳಿಸಲಾಗುವದಿಲ್ಲ. ನಿಮಗೆ ಬೇಕಾದರೆ ಈಗ ಕರೆದುಕೊಂಡುಹೋಗಿ ಇನ್ನೊಂದೆರಡು ತಾಸಿನಲ್ಲಿ ನಿಮ್ಮ ತಂದೆಯವರ ಜೊತೆ ಕಳುಹಿಸಿ ಕೊಡಿರಿ."

ಕರುಣೆಯನ್ನು ಕರೆದುಕೊಂಡು ಅವರಿಬ್ಬರೂ ಹೊರಟರು. ದಾರಿಯಲ್ಲಿ ಕಲೆಯು ಕರುಣೆಗೆ "ನೀನು ನನ್ನ ತಂಗಿಯಾಗುವಿಯಾ?" ಎಂದಳು.

"ನಿಮ್ಮ ಉಪಕಾರವನ್ನು ನಾನು ಈ ಜೀವನದಲ್ಲಿ ತೀರಿಸಲಾರೆ. ನಿಮ್ಮ ದಯೆಗೆ ಪಾತ್ರಳಾದುದು ನನ್ನ ಸುದೈವವೆಂದೇ ಹೇಳಬೇಕು."

ಕಲೆ ಹಾಗೂ ಉಮೆಯರಿಬ್ಬರೂ ಅನಾಥಾಲಯದತ್ತ ತೆರಳಲು ಮನೆಯಲ್ಲಿ ಅಶೋಕಕುಮಾರನು ಹೆಂಡತಿಯೊಡನೆ “ ಅನಾಥಾಲಯದ ಬಾಲಿಕೆಯೊಬ್ಬಳನ್ನು ತನ್ನ ತಂಗಿಯನ್ನಾಗಿ ಆರಿಸುವ ಉದ್ದೇಶವಿರಬಹುದು.? ” ಎಂದು ಕೇಳಿದನು.

“ ಕಲೆಯ ವಿವಾಹವಾದ ಬಳಿಕ ಮನೆಯಲ್ಲಾವ ಹುಡುಗಿಯೂ ಇರುವದಿಲ್ಲವೆಂದು ನೀವೇ ಒಮ್ಮೆ ಹೇಳಿದ್ದಿರಿ. ಅಲ್ಲದೆ ಅನಾಥಾಲಯದಲ್ಲಿಯಾದರೂ ಒಬ್ಬರನ್ನು ಈಗಿನಿಂದಲೇ ಹುಡುಕಬೇಕೆಂದು ಅಭಿಪ್ರಾಯ ವ್ಯಕ್ತಗೊಳಿಸಿದ್ದಿರಲ್ಲ !

“ ಯಾವಾಗ ಹೇಳಿದ್ದೆ? ”

“ ಬಹಳ ದಿನವಾಯಿತು. ”

“ ನನಗದರ ನೆನಪಿದೆಯೇ ? ”

“ ಹೂಂ ನನಗಿಂತಲೂ ಕಲೆಗೆ ಹೆಚ್ಚು ನೆನಪಿದೆ. ”

“ ಹಾಗಾದರೆ ಈ ಮಾತು ಹೇಳಿದನಳು ಅವಳೇ ಇರಬೇಕು. ”

“ ಅಲ್ಲ, ನನ್ನ ಮುಂದೆಯೇ ನೀವು ಹೇಳಿದ್ದು. ”

“ ನನಗಂತೂ ಎಚ್ಚರವಿಲ್ಲ! ”

“ ಹೀಗೆ ಹೇಳಿರಬೇಕು ಅದನ್ನೇ ನಿಜವೆಂದು ಕಲೆಯು ಆಗ್ರಹಗೊಂಡಿದ್ದಾಳೆ. ಅವಳಿಗೊಂದು ತಂಗಿಯ ಆವಶ್ಯಕತೆ ಇದ್ದಿರಬೇಕು. ”

“ ನಿನಗೂ ಅದೇ ಇಚ್ಛೆ ಇದೆಯೇ ? ” ·

“ ಹೌದು ”

“ ಹಾಗಾದರೆ ಹಾಗೆ ಕಲೆಯ ವಿವಾಹವನ್ನು ಯಾರೊಡನೆ ಮಾಡಬೇಕೆಂದು ನಿನ್ನ ಬಯಕೆ ಇದೆ. ”

“ ಈಗಿನ ರೀತಿ ಯಾವುದೂ ನನಗೆ ಬಗೆಹರಿಯದು. ಹಿಂದಿನ ಕಾಲದ–ಜಾತಕನೋಡಿ ಮಾಡುವ ಪದ್ಧತಿಯೇ ಯೋಗ್ಯವೆಂದು ನನಗನಿಸುತ್ತದೆ. ”

“ ನಿನಗೆ ಯಾವ ಪದ್ಧತಿಯೂ ಸರಿಯಾಗಿ ಗೊತ್ತಿಲ್ಲ. ಹಿಂದಿನ ರೀತಿ ಇನ್ನೆಂದೂ ನಡೆಯದು. ವಿವಾಹವೆಂದರೆ ಅದೇನು ಪಾಲಕರ ವ್ಯವಹಾರವೆಂದು ಭಾವಿಸಿರುವಿಯಾ? ”

“ ಆದರೆ ಹಿಂದಿನ ವಿವಾಹದಲ್ಲಿ ಇಂತಹ ತೊಂದರೆ ಯಾವುದೂ ಬರುತ್ತಿರಲಿಲ್ಲ. ”

“ಇದಕ್ಕಿಂತಲೂ ಎಷ್ಟೋ ಭಯಂಕರ ಹಾನಿ ಆಗುತ್ತಲೇ ಇದೆ. ಆದರೆ ನಾವು ಅದನ್ನಷ್ಟು ಗಣಿಸಿಲ್ಲ ”

“ ಹಾಗಾದರೆ, ಜಿತೇಂದ್ರನಿಗೆ ಬಾಲೆಯನ್ನು ಮದುವೆಮಾಡಿಕೊಡುವದು ಯೋಗ್ಯವೆಂದೆನಿಸುತ್ತದೆ. ಯಾಕಂದರೆ ಅವಳ ಇಚ್ಛೆ ಹಾಗೆಯೇ ಇರಬೇಕು.”

“ನನಗೂ ಹಾಗೆಯೇ ಅನಿಸುತ್ತಿದೆ ವ್ರಜೇಶನ ಸ್ವಭಾವ ನನಗೂ ಸರಿದೋರುವದಿಲ್ಲ ”

“ ನೀವು ಕಲೆಯೊಡನೆ ವಿವಾಹಯಾಗಲಿರುವಿರಾ ? “ ಎಂದು ವ್ರಜೇಶ ಜಿತೇಂದ್ರನಿಗೆ ಬಂದು ಕೇಳಿದ.

“ ಹೌದು ”

“ ಆದರೆ ಅವಳೊಡನೆ ನಾನೂ ವಿವಾಹವಾಗಲಿದ್ದೇನೆ. ಅವಳಮೇಲೆ ನಿಮಗಿಂತಲೂ ನನ್ನ ಅಧಿಕಾರ ಹೆಚ್ಚೆಂದು ನಿಮಗೆ ಗೊತ್ತೇಇದೆ. ”

“ ನೀವು ಬಾಲೆಯ ಜೊತೆಗೆ ಯಾಕೆ ಲಗ್ನವಾಗುವದಿಲ್ಲ ? ”

“ ಯಾಕೆ ಆಗಲಿ ? ನನ್ನ ತಾಯಿಯ ಇಚ್ಛೆಯಿಲ್ಲ ಅವಳಿಗಿಂತಹ ವೃದ್ಧಾಪ್ಯದಲ್ಲಿ ದುಃಖವನ್ನುಂಟುಮಾಡಲೇ ? ”

“ ಹಿಂದುಸ್ಥಾನದಲ್ಲಿರುವವರೆಲ್ಲ ಹಿಂದೂಧರ್ಮದವರೆಂದು ತಿಳಿಯುವ ಹಿರಿಯರಲ್ಲಿ ನೀವೊಬ್ಬರೆಂದು ಭಾವಿಸಿದ್ದೆ. ”

“ ಆದರೇನು ಮಾಡಲಿ ? ನಮ್ಮ ಸಂಬಂಧಿಕರೆಲ್ಲ ಲಖನೌಕ್ಕೆ ಬಂದು ಸಭೆಗೂಡಿಸಿ ‘ ನಾನು ಬಾಲೆಯನ್ನು ಲಗ್ನವಾದಲ್ಲಿ ಬಹಿಷ್ಕಾರ ಹಾಕುವದಾಗಿ ಠರಾವುಮಾಡಿದ್ದಾರೆ ”

“ ಹಾಗೆಂದರೇನು? ಹಿಂದೂ ಅಗಸ ನಿಮ್ಮ ಬಟ್ಟೆ ಒಗೆಯಲಿಕ್ಕಿಲ್ಲವೇ ? ಯಾವ ಹಿಂದುಗಳೂ ನಿಮ್ಮ ನೆರವಿಗೆ ಬರುವಂತಿಲ್ಲವೇ ? ”

“ ಅವರೆಲ್ಲರ ಮೇಲೆ ನಮ್ಮ ಸಂಬಂಧಿಕರಿಗೆಲ್ಲಿಯ ಅಧಿಕಾರ ಬಂದೀತ.”

“ ಅಂದಬಳಿಕ ನಿಮ್ಮ ಸಂಬಂಧಿಕರು ನಿಮ್ಮ ಲಗ್ನಕ್ಕೆ ಬರಲಿಕ್ಕಿಲ್ಲವೆಂದಲ್ಲವೇ ? ಅಂತಹರು ತಮ್ಮ ಮಕ್ಕಳನ್ನೂ ಈ ಸಮಾರಂಭಕ್ಕೆ ಬರಗೊಡುವಂತಿಲ್ಲನೆಂದು ಅಂಜಿಕೆಯೇ ! ”

"ಅದೇ ನನಗಿರುವ ಅಂಜಿಕೆ. ನಮ್ಮ ನಾಡಿನ ತರುಣರಲ್ಲೆಲ್ಲ ಸ್ವತಂತ್ರ ಭಾವನೆ ಇದ್ದರೆ. ಸತ್ಯಕ್ಕಾಗಿ ಬರುವ ಎಡರನ್ನೆಲ್ಲ ಸಹಿಸುವ ಸಾಹಸವಿದ್ದರೆ ನಾನೇಕೆ ಅಂಜಬೇಕು ? ಹಿಂದೂಸ್ತ್ರೀಯರ ಮೂಕವೇದನೆಯಿಂದಲೇ ಹಿಂದೂಧರ್ಮ ರಸಾತಲಕ್ಕೊತ್ತಲ್ಪಡುತ್ತದೆ. ನೈತಿಕ ಬಲವಿಲ್ಲದಿರುವಿಕೆಯೇ ಪರಾಧೀನತೆಯ ಮುಖ್ಯಲಕ್ಷಣ"

"ಇಂತಹ ದೌರ್ಬಲ್ಯಗಳನ್ನೆಲ್ಲ ದೂರಮಾಡಲೇ ಬೇಕು"

"ತಮ್ಮ ಬಲಿದಾನವನ್ನು ಮಾಡಲು ಸಿದ್ಧರಾದ ತರುಣರಾದರೂ ಎಲ್ಲಿದ್ದಾರೆ ?"

"ಅವರು ಬಲಿದಾನ ಮಾಡಬೇಕಾಗಿಲ್ಲ. ಹೆಣದಂತೆ ನಿಶ್ಚೇಷ್ಟಿತರಾಗಿದ್ದಾರೆ. ಅವರಲ್ಲಿ ಚೈತನ್ಯ ಒಡಮೂಡಬೇಕಾಗಿದೆ."

"ಆದರೆ ಇದ್ದ ಸ್ಥಿತಿಯೇ ಮೇಲೆಂದು ಭಾವಿಸಿದ್ದಾರೆ-ಅವರೆಲ್ಲ"

"ಈಗಿನ ಸ್ಥಿತಿ ಮನುಷ್ಯ ಮಾತ್ರರಿಗೆ ಯೋಗ್ಯವಲ್ಲ. ಬೆರಣಿಯ ಹುಳು ತನ್ನಷ್ಟು ಸುಖ ಇನ್ನಾರಿರೂ ಇಲ್ಲವೆಂದು ತಿಳಿದಂತೆ"

"ನಾವಾದರೂ ಎಲ್ಲಿ ಅಂತಹಸ್ಥಿತಿ ಮುಟ್ಟಿದ್ದೇವೆ! ನೀವು ಅಂತಹ ಸ್ಥಿತಿ ಮುಟ್ಟುವದಕ್ಕಾಗಿಯೇ ಕಲೆಯೊಡನೆ ವಿವಾಹವಾಗಲಿರುವಿರಾ ?"

"ನೀವು ಯಾವ ರೀತಿಯಿಂದ ಈ ಮಾತನಾಡುತ್ತಿರುವಿರೆಂದು ನನಗೆ ಗೊತ್ತಾಗುತ್ತಿದೆ. "ಹೌದು" ಎಂದೇ ಒಪ್ಪಿಕೊಳ್ಳುವೆ."

"ಏನೇ ಇರಲಿ. ಎಲ್ಲ ಕಡೆಯಿಂದಲೂ ಕೈತೊಳೆದು ನನ್ನನ್ನು ಬೆನುಹತ್ತಿದಂತೆ ಕಾಣುತ್ತಿದೆ. ನಿಮ್ಮ ಪ್ರೇರಣೆಯಿಂದಲೇ ಅಕೆ ನನ್ನೊಡನೆ ಕೆಲದಿನ ಮಾತುಬಿಟ್ಟಿರಬೇಕು. ಇತ್ತ ನಾನು ಕಲೆಯೊಡನೆ ವಿವಾಹವಾಗಲಿರುವಷ್ಟರಲ್ಲಿ ನೀವೂ ಉಮೇದವಾರಿಗೆ ನಿಂತಿರಿ."

"ಆದರೆ ನಾನು ಯಾವ ದೃಷ್ಟಿಯಿಂದಲೂ ನಿಮ್ಮನ್ನು ಮೀರುವಂತಿಲ್ಲ. ಅಂದಬಳಿಕ ನಿಮಗೇತರ ಚಿಂತೆ?"

"ಈಗ ಈ ಮಾತು ಹೇಳುತ್ತೀರಿ. ಒಂದು ವೇಳೆ ನಾನು.........

"ಆದರೂ ನನ್ನ ಅಣ್ಣ ಎಲ್ಲವನ್ನು ಅಶೋಕಕುಮಾರರ ಹತ್ತಿರ ಹೇಳಿಯೇ ಬಿಟ್ಟಿದ್ದ."

“ ನನ್ನ ತಾಯಿ ಒಪ್ಪಿದಲ್ಲಿ ಬಾಲೆಯೊಡನೆ ವಿವಾಹವಾಗಲು ನಾನು ಸಿದ್ಧನಿದ್ದೇನೆ. ಆದರೆ ಬಾಲೆಯುನ್ನಷ್ಟು ನಮ್ಮ ಧರ್ಮದಂತೆ... ....

“ ಇಲ್ಲ; ಹೀಗೆಂದರೆ ಆಗದು. ಈಗ ಶುದ್ಧರಾಗಬೇಕಾದುದು ನೀವೇ ಹೊರತು ಆಕೆಯಲ್ಲ. ಹಿಂದೂಧರ್ಮದ ಈ ಅಭಿಮಾನ ಹೋದ ಹೊರತು ನಾವು ಬದುಕಲಾರೆವು. ನಾವು ಜೀವನ್ಮೃತರಾಗಬೇಕಾದುದು ಒಳಿತಲ್ಲ. ಬಾಳೋಣ, ಇಲ್ಲವೆ ಸಾಯೋಣ. ”

“ನಮ್ಮ ಕುಂದುಕೊರತೆಗಳನ್ನು ದೂರಮಾಡಲು ಹವಣಿಸಿದ ಅನೇಕ ಹಿರಿಯರಿದ್ದಾರೆ. ಅವರದೆಲ್ಲ ನಿಷ್ಫಲವಾಗಿದೆಯೆಂದು ನನ್ನ ಅಭಿಪ್ರಾಯವಲ್ಲ. ಆದರೆ ನಿಮ್ಮ ರೀತಿ ಸಾಮ್ಯವಾದದ ಜಾತಿಯೆಂದು ತೋರುತ್ತಿದೆ. ”

“ ಹೌದು, ಇಂದಿನ ಜಗತ್ತಿಗೆ ಅದೊಂದೇ ಅರಕಮಂತ್ರ ತಮಗೊಬ್ಬರಿಗೇ ಜೀವಿಸುವ ಹಕ್ಕು ಭಾವಿಸುವವರ ಬೇಳೆ ಬೇಯಲಾರದು. ”

“ ನೀವೆಲ್ಲರೂ ನನಗೆ ಬಾಧೆಯಾಗದಂತೆ ನೆರವಾಗುವ ಭರವಸೆಯಿತ್ತರೆ ನಾನು ಬಾಲೆಯನ್ನು ಲಗ್ನವಾಗಲು ಈಗಲೂ ಸಿದ್ಧನಿದ್ದೇನೆ. ”

“ ಆದರೆ ನೀವು ಶಿಲೆಯೊಡನೆ ಲಗ್ನವಾಗುವದಾದರೂ ನನ್ನದೇನೂ ಆತಂಕವಿಲ್ಲ. ”

“ ದಯವಿಟ್ಟು ಅಶೋಕಕುಮಾರರೊಡನೆ ಇದೇ ಮಾತನ್ನು ಹೇಳಲಾರಿರಿ? ”

“ ಅವರಿಗೆ ಹೇಳಲು ನನಗೇನಧಿಕಾರ ? ಈ ಒಣ ಉಸಾಬರಿಯೇ ನನಗೆ ಬೇಡ. ಈ ಪ್ರಕರಣದಲ್ಲಿ ನನಗೇನೂ ಸಂಬಂಧವೇ ಇಲ್ಲ ”

“ ಹಾಗಾದರೆ ಚನ್ನಾಯಿತು “ ಎಂದು ವ್ರಜೇಶ ಹೊರಟು ಹೋದ.

## ೨೦

ಉಮೆಯು ಬಾಲೆಗೊಂದು ಪತ್ರ ಬರೆದಿದ್ದಳು. ಅದರಲ್ಲಿ ಅನೇಕ ವಿಷಯಗಳನ್ನೆಲ್ಲ ಬರೆದು ಆ ಮೇಲೆ ಕೆಳಗಿನಸಂಗತಿ ಬರೆದಿದ್ದಳು. “ವ್ರಜೇಶನೊಡನೆ ನಿಮ್ಮ ಲಗ್ನವಾಗಲು ತಾಯಿ ಒಪ್ಪಿದ್ದರು. ಆದರೆ ಮಧ್ಯದಲ್ಲಿ ಈ ರೀತಿ ಹೇಗೆಘಟಿಸಿತು? ಅವಳ ಸಂಬಂಧಿಕರು ಬಂದು ನಯಭಯಗಳನ್ನು ತೋರಿಸಬೇಕು. ಅಲ್ಲವೇ? ಅದಕ್ಕಾಗಿ ನೀನು ತಾಯಿಯ ಜೊತೆಗೆ-ಕೊನೆಗೆ ಒಬ್ಬಳಾದರೂ ಒಂದೆರಡು ದಿನದ ಮಟ್ಟಿಗೆ ಬಂದು ಹೋಗು. ”

ಬಾಲೆಯು ಪತ್ರವನ್ನು ಕೊನೆಯವರೆಗೆ ಎರಡು ಬಾರಿ ಓದಿ ಮಾಗಿಸಿದಳು. ಆಮೇಲೆ ತಮ್ಮನನ್ನು ಕರೆದು“ ಕಲೆಯೊಡನೆ ವಿವಾಹವಾಗಿ ಬರಲು ಜಿತೇಂದ್ರಣ್ಣ ಹೋಗಿದ್ದಾನೆ” ಎಂದಳು.

“ ಹೀಗೆಂದೂ ಆಗದು. ಯಾರೋ ಅವರಿಗೆ ಆಗದವರು ಹೀಗೆ ಬರೆದಿರಬೇಕು ”

“ ಇದೆಲ್ಲಿಯ ಮಾತೋ ? ಹೀಗೇನು ಹೇಳುವಿ? ”

“ ಜಿತೇಂದ್ರಣ್ಣನನ್ನು ನಾನೇನು ಅರಿಯದವನೇ ? ”

“ ನನ್ನ ಜೊತೆಗೆ ಝಾಂಸಿಗೆ ಬರುವಿಯಾ? ”

“ ಆಗದೇನು ? ಪರೀಕ್ಷೆ ಹೇಗೂ ಮುಗಿದಿದೆ. ನನಗೀಗ ರಜೆ ಇದೆ.”

“ ಹಾಗಾದರೆ ಎಲ್ಲವನ್ನೂ ಅಣಿಮಾಡಿಕೋ. ಇಂದೇ ಸಂಜೆಯ ಟ್ರೇನಿಗೆ ಹೊರಡೋಣ. ನಾನು ಈಗಲೇ ಡಾಕ್ಟರನ ತಾಯಿಗೆ ಭೆಟ್ಟಿಯಾಗಿ ಬರುವೆ ಅವರು ಬಂದರೂ ಬರಬಹುದು ” ಎಂದು ಆ ಪತ್ರತೆಗೆದುಕೊಂಡು ಹೊರಟಳು. ವ್ರಜೇಶನ ತಾಯಿ ಆ ಪತ್ರವನ್ನು ಓದಿದ ಬಳಿಕ “ ಮಗೂ, ಇಂದಿನ ಹುಡುಗರಲ್ಲಿ ಸ್ವಲ್ಪವೂ ನೈತಿಕಬಲವಿಲ್ಲೆಂದು ಕಾಣುತ್ತಿದೆ. ”

“ ಹಾಗಲ್ಲವಮ್ಮಾ, ಜಿತೇಂದ್ರಣ್ಣ ನಿರಾಶನಾಗಿ ಲಗ್ನಕ್ಕೆ ಸಮ್ಮತಿಸಿದ್ದಾನೆ. ”

“ ಅದೆಂತಹ ನಿರಾಶೆಯಾಯಿತೇ ? ”

“ ನಾನು ಈ ಸಂಗದಲ್ಲಿ ಸೇರಲು ಅವರೇ ಕಾರಣ. ಮುಂದಿನ ಜೀವನಕ್ಕೆ ವ್ರಜೇಶನು ಕಾರಣ. ಇವರಿಬ್ಬರ ನೆರವಿನಿಂದಲೇ ನನ್ನ ದೇಹ ಬೆಳೆದು ಬಂದಿದೆ. ಮಾನಸಿಕ ವಿಕಾಸವಾಗಿದೆ ದೀನತನವನ್ನು ಹಿಂದೂಡಿಸಿ, ಮನುಷ್ಯರಾಗಿ ನಿಲ್ಲಬಹುದೆಂಬ ಆತ್ಮವಿಶ್ವಾಸವುಂಟಾಗಿದೆ. ಆದರೂ ಜಿತೇಂದ್ರಣ್ಣನ ಸಹಾಯವೇ ಒಂದು ತೂಕ ಹೆಚ್ಚು. ಒಂದುವೇಳೆ ಅವರು ಸಿಗದಿದ್ದರೆ ನಾನು ಈ ಹಾದಿಗೆ ಹತ್ತುತ್ತಿರಲಿಲ್ಲ. ನನ್ನ ತಾಯಿ ತುಂಬಾ ಸ್ವಾಭಿಮಾನಿನಿ. ತಂದೆಯಂತೂ ಉದಾರ ವಿಚಾರದಾತ. ಹೀಗಾಗಿ ಒಬ್ಬ ಸಂಬಂಧಿಕರೂ ಹತ್ತಿರ ಸುಳಿಯುತ್ತಿರಲಿಲ್ಲ. ಜಿತೇಂದ್ರಣ್ಣ ನನ್ನ ಮುಂದೆ ಹಲವಾರು ಸಲ ಆವೇಶದಿಂದ “ ನಾನು ಆಜನ್ಮ ಬ್ರಹ್ಮಚಾರಿಯಾಗಿ ಈ

ದೇಶದ ಸೇವೆಮಾಡುವೆ. ನಮ್ಮ ದೇಶಕ್ಕೆ ಅಂತಹ ಸೇವಕರ ಅವಶ್ಯಕತೆ ತುಂಬಾ ಇದೆ." ಎನ್ನುತ್ತಿದ್ದ. ನಾನೂ ಸಹ ಅವನಂತೆಯೇ ಆಜನ್ಮ ಬ್ರಹ್ಮ ಚಾರಿಣಿಯಾಗಿ ದೇಶಸೇವಿಸುವೆನೆಂದು ಅನೇಕಸಲ ಮಾತುಕೊಟ್ಟಿದ್ದ " ಆಕೆ ಯಿಂದ ಮುಂದರಿಸಲಾಗಲಿಲ್ಲ, ಕುತ್ತಿಗೆ ಉಬ್ಬಿಬಂತು. ಕಣ್ಣೀರು ಹರಿಯಿತು.

" ಒಂದೊಂದು ಮನೆಯನ್ನು ಚನ್ನಾಗಿ ನಡೆಸಿದರೆ ಸಾಕು; ದೇಶದು ದ್ಧಾರ ಇತ್ಯಾದಿ ದೊಡ್ಡ ದೊಡ್ಡ ಮಾತನ್ನಾಡುವವರೆಲ್ಲ ಕೈಲಾಗದವರು. ತಮ್ಮ ಪ್ರಸಿದ್ಧಿಗಾಗಿ-ಕೀರ್ತಿ ಲಾಲಸೆಗಾಗಿ ಹಾಕಿದಸೋಗು ಅದು. "

" ಅಮ್ಮಾ ನಿಮ್ಮ ಮಾತು ದಿಟ. ನೆರಮನೆಗೆ ಬೆಂಕಿಬಿದ್ದಾಗ ನಂದಿಸ ಬೇಕಾದುದು ಅವನಮೇಲೆ ಉಪಕಾರಮಾಡುತ್ತೇವೆಂದಲ್ಲ. ಕೆಲಹೊತ್ತಿನ ಲ್ಲಿಯೇ ಆ ಉರಿ ನಮ್ಮ ಮನೆಯನ್ನು ನುಂಗಬಾರದೆಂದು. ಭೂಲೋಕ ವೆಂದರೆ ಸ್ವರ್ಗಕ್ಕೆಹೋಗಲು ಟಿಕೇಟು ತೆಗೆಯುವ ಸ್ಥಳನೆಂದು ತಿಳಿದು ಭಾವ ನಾಪರರಾಗಿ ಸಿಕ್ಕಸಿಕ್ಕಂತೆ ಕೆಲಸಮಾಡುತ್ತಿದ್ದುದರಿಂದಲೇ ದಾಸರಾಗಿ ಸತ್ತಾ ಧಾರಿಗಳ ಲತ್ತಾಪ್ರಹಾರಕ್ಕೆ ತುತ್ತಾಗುತ್ತಲಿದ್ದೇವೆ. "

" ಹಾಗಾದರೆ ನೀನು ಇಂತಹ ವಿಚಾರಗಳನ್ನು ಇನ್ನೂತನಕ ಆಡಿ ಲಿಲ್ಲವಲ್ಲ. "

" ಅಮ್ಮಾ, ರಕ್ತಮಾಂಸದಿಂದುಂಟಾದ ದೇಹವಿದು. ಮನಸ್ಸನ್ನು ಅಂಕೆಯಲ್ಲಿಡಲಾಗುತ್ತದೋ? ಇಲ್ಲ-ಯಾರುಬಲ್ಲ, ಹೇಳುವದೊಂದು-ಮಾಡು ವದಿನ್ನೊಂದು ಮಾತ್ರ ಆಗಬಾರದು. ವ್ರಜೇಶರಾಯರು ಮೊದಲು ಹಣ ಕೀರ್ತಿಗಳನ್ನು ಗಳಿಸಿ ಆ ಮೇಲೆ ಸೇವಾಕಾರ್ಯಕ್ಕೆ ಧುಮುಕಬೇಕು ಎನ್ನು ವವರ ಪಂಗಡದವರು. "

"ಏನೋ ನನಗೊಂದೂ ತಿಳಿಯದು. ನೀವೆಲ್ಲ ನಾಟಕದಲ್ಲಿ ಪಾತ್ರ ಮಾಡಿದವರ ಹಾಗೆ ಹೇಳುತ್ತಿರುವಿರಿ? ಸ್ವತಂತ್ರ ದೇಶದವರು ಹೇಗೆ ವರ್ತಿ ಸುತ್ತಾರೆಂದು ಬಲ್ಲಿಯಾ? ತಮ್ಮ ತಮ್ಮ ಕೆಲಸಗಳನ್ನೆ ಮುಖ್ಯವೆಂದು ತಿಳಿದು ಕೆಲಸಮಾಡುತ್ತಾರೆ. ದೇಶದ ಕರೆ ಬಂದೊಡನೆಯೇ ಹಿಂದು ಮುಂದು ನೋಡದೆ ಧುಮುಕುತ್ತಾರೆ. ಮಾಡುತ್ತಿರುವ ಕೆಲಸವನ್ನು ಸರಿಯಾಗಿ ನಿರ್ವ ಹಿಸುವದೇ ಸ್ವತಂತ್ರ ರಾಷ್ಟ್ರಗಳ ಜನರ ಮೂಲಮಂತ್ರ."

ಮನೆಗೆ ಬಂದಾಗ ಅಲ್ಲಿ ಯಾರೂ ಇರಲಿಲ್ಲ. ಇಬ್ಬರೂ ಹೊರಗೆ ಹೋಗಿದ್ದರು. “ಈಗ ಉಮೆಯಿದ್ದಲ್ಲಿಗೇ ಹೋಗೋಣ. ಎಂದು ಯೋಚಿಸಿದಳಾದರೂ, ಅಲ್ಲಿಯೇ ಹೊರಗೆ ಹಾಕಿದ ಖುರ್ಚಿಯ ಮೇಲೆ ಕುಳಿತುಕೊಂಡಳು.

ಕೆಲಹೊತ್ತಿನಲ್ಲಿಯೇ ಅಣ್ಣತಮ್ಮಂದಿರಿಬ್ಬರೂ ಅಲ್ಲಿಗೆ ಬಂದರು. ಜಿತೇಂದ್ರನೇ ಮೊದಲು “ನೀವು ಬರುತ್ತೇವೆಂದು ಒಂದು ಕಾರ್ಡನ್ನಾದರೂ ಹಾಕಬಾರದಿತ್ತೆ? ಸುಮ್ಮನೆ ತೊಂದರೆಗೊಳಗಾದಿರಲ್ಲ!” ಎಂದ.

“ಇಲ್ಲ. ತೊಂದರೆ–ಗಿಂದರೆಯೇನೂ ಆಗಲಿಲ್ಲ.”

“ಮನೆ ಹೇಗೆ ಗೊತ್ತು ಹಚ್ಚಿದಿರಿ?”

“ಪ್ರತಿಯೊಂದು ಮನೆಯನ್ನು ಗುರ್ತಿಸಿದ್ದ ನಕಾಶ ನನ್ನ ಬಳಿಯಲ್ಲಿತ್ತು.

“ಅದು ಹೇಗೆ ದೊರಕಿತು? ಅದನ್ನು ತಯಾರಿಸಿದವರಾರು?”

“ಉಮೆಯ ಪತ್ರ.”

ಆ ಮೇಲೆ ಜಿತೇಂದ್ರನು ಅವರಿಬ್ಬರ ಪರಿಚಯವನ್ನೂ ಅಣ್ಣನಿಗೆ ಮಾಡಿಕೊಟ್ಟ. ಉಪೇಂದ್ರನು “ನಿಮ್ಮ ಮೋರೆ ನೋಡುವದಷ್ಟು ಮಾತ್ರ ಬಾಕಿ ಇತ್ತು. ನಿಮ್ಮ ಬಗ್ಗೆ ತುಂಬಾ ಕೇಳಿದ್ದೆ” ಎಂದ.

ಆ ಮೇಲೆ ಕುಶಲ ಪ್ರಶ್ನೆಗಳೆಲ್ಲ ಆಗಿ ಒಂದೆರಡು ತಾಸಿನಲ್ಲಿ ಊಟವೂ ಆಯಿತು.

“ಅಣ್ಣಾ, ನಿನ್ನ ಮದುವೆಯ ಆಮಂತ್ರಣ ನೀನು ಕೊಡದಿದ್ದುದರಿಂದ ನಾನಾಗಿಯೇ ಬರಬೇಕಾಯಿತು.”

“ಮನೆಯವರಿಗೂ ಆಮಂತ್ರಣ ಬೇಕೆ?”

“ಆದರೆ ಮನೆಯವರಿಗೆ ಕೇಳದೆ ಯಾರೂ ಹೀಗೆ ಮಾಡುವದಿಲ್ಲ.”

“ಹಾಗಾದರೆ ನಾನು ಕಲೆಯೊಡನೆ ವಿವಾಹವಾಗಲಿರುವೆನೆಂದು ಭಾವಿಸಿದಿಯಾ?”

“ಭಾವಿಸುವದೇನು? ಎಲ್ಲ ನಿಶ್ಚಯವಾದಮೇಲೂ ಈ ರೀತಿ ಕೇಳುತ್ತಿರುವಿಯಲ್ಲ?”

“ನಿಶ್ಚ[illegible]ಣ್ಣಾ? ಕಲೆಯೊಡನೆ ನಾನು ಮದುವೆಯಾಗುತ್ತೇನೆಂದು ಗುಲ್ಲೆಬ್ಬಿಸಿದರೆ, ವ್ರಜೇಶ ತಾನಾಗಿಯೇ ಅವಳನ್ನು ಮದುವೆಯಾಗಲು ಉತ್ಸುಕನಾಗುವನೆಂದು ಅರಿತಿದ್ದೆ.”

"ಹಾಗಾದರೆ ನಿನ್ನ ಲಗ್ನವೆಂಬುದೆಲ್ಲ ಸುಳ್ಳೇ ಅಂದಹಾಗಾಯಿತು. ನಾನು ಉಮೆಯಿದ್ದಲ್ಲಿ ಹೋಗಬೇಕು."

ಆ ಮೇಲೆ ಅಲ್ಲಿಂದ ಉಮೆಯು ಮನೆಗೆ ಹೋದಳು. ಬಾಲೆಯನ್ನು ಕಂಡು ಉಮೆಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಆಕೆ ಅದೇತಾನೇ ಕಲೆಯ ಮನೆಯಿಂದ ಬಂದಿದ್ದಳು

"ಬಾಲಾ, ನನ್ನ ಪತ್ರ ಮುಟ್ಟಿತೇನೇ?"

"ನಿಮ್ಮ ಆಜ್ಞೆಯಿಂದಲೇ ಬಂದಿರುವೆ."

"ಈಗ ನಿನಗೆಲ್ಲ ಸಂಗತಿ ಗೊತ್ತಾಗಿರಬೇಕು. ಈಗ ನಿನ್ನ ಅಂಬೋಣವೇನು?"

"ನನ್ನ ಇಚ್ಛೆಯೇನಿದ್ದಿತು? ಎಂದಿನಿಂದಲೂ ನಾನು ಸೇವಾಸಂಘದವಳು. ವ್ರಜೇಶನೇ ಅಲ್ಲಿಂದ ಹೊರತೆಗೆಯಲು ಯತ್ನಿಸಿದವನು. ಈಗ ನನ್ನ ಮೇಲೆ ಯಾವುದೇ ರೀತಿಯಿಂದ ಅಧಿಕಾರ ನಡೆಸಲಾರರು."

"ಆದರೆ ಅವರೊಡನೆ ಲಗ್ನವಾಗಲು ಕಲೆಯು ಒಪ್ಪಬೇಕಾಯಿತಲ್ಲ?"

"ಯಾಕೆ?"

"ಜಿತೇಂದ್ರನ ಪ್ರಭಾವ ಬಹಳಷ್ಟಾಗಿದೆ. ಆಕೆಯ ಮೇಲೆ."

"ನೀನೂ ಇದನ್ನು ಒಪ್ಪುವಿಯಾ? ಜಿತೇಂದ್ರಣ್ಣ ಮದುವೆಯಾಗಲು ಕುತೂಹಲಿಯಾಗಿಲ್ಲ"

"ಆದರೂ ಕಲೆಯು ಮದುವೆಯಾಗಿ ದೇಶಕಾರ್ಯದಲ್ಲಿ ತೊಡಗಬೇಕೆಂದು ಅವನ ಇಚ್ಛೆಯಿದೆ."

"ಆತ ಎಲ್ಲರಿಂದಲೂ ಇದೆರೀತಿ ಬಯಸುತ್ತಾನೆ.

"ಅವಳಾದರೂ ಅವನೊಬ್ಬನೇ ಕಲಾಕಾರನೆಂದು ತಿಳಿಯುತ್ತಾಳೆ. ನಿರ್ಜೀವ ಕಲೋಪಾಸಕರಿಗಿಂತ ದೀನ ದುರ್ಬಲರ ಸೇವೆಮಾಡಿ ಅವರಲ್ಲಿ ಚೈತನ್ಯ ತುಂಬುವಾತನೆ ನಿಜವಾದ ಕಲಾಪಿವನೆಂದ. ಆಕೆಯಮತ. ಅವಳ ಚಿತ್ರವೆಲ್ಲ ಅವೇ ಸಾಧ್ಯದ ಸಾಧನಗಳಾಗಿವೆ. ಇನ್ನು ಮುಂದೆ ಅದನ್ನೇ ಆಕೆ ಆಚರಣೆಯಲ್ಲಿಯೂ ತರಬಹುದು."

ನಾನು ಡಾಕ್ಟರೀ ಕಲಿಯುವದನ್ನು ಬಿಟ್ಟು ಸೇವಾಸಂಘದಲ್ಲಿ ಸೇರಲಿರುವೆನೆಂದು ಡಾಕ್ಟರ ವ್ರಜೇಶರಿಗೆ ತಿಳಿಸಿಬಿಡು."

" ಇವರಿಂದೇನಾದೀತೇ ? "

" ಅಂಗೈ ಹುಣ್ಣಿಗೆ ಕನ್ನಡಿ ಏಕೆ ? ಎಲ್ಲವೂ ತಾನೇ ತಿಳಿದೀತು "

" ಅವನೇನು ಒಮ್ಮೆಲೇ ಖನಾವಿಗೆ ಹೋಗನುವಂತಹ ಕಲ್ಪಿಸಿರು ವೆಯಾ ? "

" ಹಾಗೂ ಅಲ್ಲವೆಂದಲ್ಲ "

" ನೀನು ಇಲ್ಲಿಯೇ ಇರುವಿಯಷ್ಟೇ "

" ನಾನು ಅವನನ್ನು ಸ್ಟೇಶನ್ನಿನಿಂದ ತಿರುಗಿ ಬರದಂತೆ ಮಾಡುವೆ. "

" ನಿಜವಾಗಿಯೂ? "

" ಹೌದು. "

" ಆದರೆ ನೀನು ಇಲ್ಲಿಗೆ ಬಂದುದು ಅವನ ತಾಯಿ ಹೇಳಿರಬಹುದಲ್ಲ. "

" ಇಲ್ಲ. ಅವಳಿಗೆ ಹೇಳಬಾರದೆಂದು ಬಿನ್ನವಿಸುವೆ "

" ಹಾಗೇ ಆಗಲಿ. ಏನು ಮೋಜು ನಡೆಯುತ್ತದೆಯೆಂದಾದರೂ ನೋಡೋಣ "

" ಹೇಗೆ ? ತಮಾಷೆಯಾದೀತೇ ? "

" ನಿಮಗೇನು ? ಪಾಪ, ಸಾಧಾರಣ ಹುಡುಗನೊಬ್ಬ ನಿಮ್ಮ ಕೈಯಲ್ಲಿ ಸಿಕ್ಕಿದ್ದಾನೆ. "

" ತನ್ನ ಕಾಲಮೇಲೆ ತಾನೇ ಗುದ್ದಲಿ ಹಾಕಿಕೊಳ್ಳುತ್ತಿದ್ದಾನೆ ಅವನೊಬ್ಬನೇ ಅಲ್ಲ; ಕಲಿತವರೆನ್ನಿಸುವವರಲ್ಲಿ ಇಂತಹ ತೊಂದರ ಎಷ್ಟೋ ಇದೆ."

" ನನ್ನ ಗಂಡನನ್ನು ಹೀಗೆ ಮಾಡಿರಲಿಲ್ಲ ನೋಡುವಾ " ಎಂದು ಉಮೆಯು ನಗುತ್ತಿದಳು

೨೨

ಬಾಲೆಯ ಮಾತು ಹಾಗೂ ಸೇವಾಭಾವನೆಯಿಂದ ಪ್ರಜೇಶನ ತಾಯಿಯು ಆಕೆಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಬೇಕೆಂದು ಬಯಸಿದ್ದಳು. ಮಗನ ಮುಂದೆಯೂ ಅದೇ ರೀತಿ ಮಾತು ತೆಗೆದಳು.

" ಅಮ್ಮಾ ಹೀಗೆ ನಿನ್ನ ಬಯಕೆ ಇದ್ದರೆ, ಆಕೆಯನ್ನೇಕೆ ಜೊತೆಗೆ ಕರೆದುಕೊಂಡು ಬರಲಿಲ್ಲ ? "

" ಆಕೆ ನಾಳೆ ಬರಬಹುದು. "

ಇದನ್ನು ಕೇಳಿದಂತೂ ಬಾಲೆಯು ಕೈತೊಳೆದೇ ತನ್ನ ಬೆನ್ನುಹತ್ತಿದಾ ಳೆಂದು ಭಾವಿಸಿಕೊಂಡ. ಆತನಿಗೆ ಬಾಲೆಯ ಬಗ್ಗೆ ಇನ್ನಷ್ಟು ಬೇಸರ ಬಲಿಯಿತು. ಮೂರನೇದಿನ ಅಶೋಕಕುಮಾರನೊಡನೆ ಭೆಟ್ಟಿಯಾದಾಗ ಆತ ಕಲೆಯು ತರುಣಿಯನ್ನು ತನ್ನ ತಂಗಿಯನ್ನಾಗಿ ಸಂಗ್ರಹಿಸಿದ ಸುದ್ದಿಯನ್ನೆಲ್ಲ ಹೇಳಿದ. ಆಮೇಲೆ " ನೃಜೇಶ, ನಿನ್ನೆ ನಾವೆಲ್ಲ ಕೂಡಿ ಒಂದು ತೀರ್ಮಾನಕ್ಕೆ ಬಂದಿದ್ದೇವೆ. ಹಿಂದೆ ಸ್ವಯಂವರ ಪದ್ಧತಿಯಿದ್ದಾಗ ಬಗೆಬಗೆಯಾಗಿ ವರನ 'ಶಾರೀರಿಕ ಮಾನಸಿಕ ಸ್ಥಿತಿಯನ್ನು ಪರೀಕ್ಷಿಸುತ್ತಿದರು ಈಗ ಅಂತಹ ಪರೀಕ್ಷೆ ತೆಗೆದುಕೊಳ್ಳುವದೇ ಅಸಂಭವವಾಗಿದೆ. ಆದರೂ ದೇಶಭಕ್ತನಿಗಷ್ಟೇ ಮದುವೆಯಾಗುವ ಪಕ್ಷ ಎಂದು ಕಿಂದಗಿ ತಪ್ಪಾಗಲಾರದು "

" ಆದರೆ ನಮ್ಮಲ್ಲಿ ದೇಶಸೇವೆ ಮಾಡಲಾಗದವರೇ ಮದುವೆಯಾಗುತ್ತಾರೆ. "

" ನಮ್ಮಲ್ಲಿಂದ ದೇಶಸೇವೆಗೂ, ಪಾಶ್ಚಾತ್ಯರ ಇಲ್ಲವೆ ಸ್ವಾಧೀನ ರಾಷ್ಟ್ರಗಳ ದೇಶಭಕ್ತಿಗೂ ಬಹು ಅಂತರವಿದೆ. ಸ್ವದೇಶಭಕ್ತಿ ಹೇಡಿಗಳಿಗೂ ನಿಲುಕುವಂಥಹದಲ್ಲ; ಸ್ವಾರ್ಥಕ್ಕಾಗಿ ದೊಡ್ಡ ದೊಡ್ಡ ಹುದ್ದೆಸೇರುವವರಿಗೂ ದೊರೆಯುವಂತಿಲ್ಲ. "

" ಹಾಗಾದರೆ ನಮ್ಮಂತಹ ಜನ ಲಗ್ನವಾಗಬಾರದೆಂದು ನಿಮ್ಮ ಅಭಿಪ್ರಾಯವೇ ? ನೃಜೇಶ ನಗುತ್ತ ಕೇಳಿದ

" ನೀವೇನೂ ಅವಿವಾಹಿತರಾಗಿರಲಾರಿರಿ. ನಿಮ್ಮಂತಹರಿಗೆ ಸ್ತ್ರೀಯರದೇನು ಕೊರತೆ ? "

" ಹಾಗೇ ಆಗಲಿ. ಆದರೆ ನೀವು ನನ್ನನ್ನು ಸರಿಯಾಗಿ ತಿಳಿದುಕೊಂಡಿಲ್ಲ. ನನ್ನ ತಂದೆಯು ಜೀವದ ಗೆಳೆಯರಲ್ಲಿ ನೀವೊಬ್ಬರೆಂದು ಕೇಳಿದ್ದೆ. ತಂದೆಯ ಯೋಗ್ಯತೆಯ ಅಂಶ ಕೆಲಮಟ್ಟಿಗಾದರೂ ನನ್ನಲ್ಲಿದೆ. ಕಲೆಯನ್ನು ನನಗೆ ವಿವಾಹಮಾಡಿಕೊಡುವದಾದರೆ ನನ್ನ ನೌಕರಿಯನ್ನು ಸಹ ಇಂದೇ ತ್ಯಜಿಸಲು ಸಿದ್ಧನಿದ್ದೇನೆ. "

" ನನ್ನ ಅರ್ಥ ಹಾಗಲ್ಲ; ಮದುವೆಯಾಗುವ ಮೊದಲು ದೇಶದ ಯಾವುದಾದರೊಂದು ಕಾರ್ಯವನ್ನು ನೀನಾಗಲೀ, ಕಲೆಯಾಗಲೀ ಮಾಡಿ ತೋರಿಸಬೇಕು. "

"ಮದುವೆಯಾದ ಮೇಲೆ ಅಂತಹ ಕಾರ್ಯ ಮಾಡಲಾಗಲಿಕ್ಕಿಲ್ಲವೆಂದು ನಿಮ್ಮ ಅಭಿಪ್ರಾಯವೆ?"

"ನನ್ನ ಅಭಿಪ್ರಾಯ ಹಾಗಿಲ್ಲದಿದ್ದರೂ—ಕಲೆಯ ಅಭಿಪ್ರಾಯ ಹಾಗೆಯೇ ಇದೆ"

"ಹಾಗಾದರೆ ನಾನು ಅದಕ್ಕೂ ಸಿದ್ಧನಿದ್ದೆ" ಎಂದ.

ಇತ್ತ ವ್ರಜೇಶನು ಬಂದಾಗಲೇ ಅವನ ತಾಯಿ ಅತ್ತ ಉಪೇಂದ್ರನಲ್ಲಿಗೆ ಹೋಗಿದ್ದಳು. ಬಾಲೆಯನ್ನು ತನ್ನ ಜೊತೆಗೆ ಕರೆದುಕೊಂಡು ಹೋಗಬೇಕೆಂದು ಆಕೆಯ ಬಯಕೆಯಿತ್ತು. ಆದರೆ ಬಾಲೆಯು ಇನ್ನೂ ಎರಡುದಿನ ತಡೆಯಲು ವಿನಂತಿಸಿದಳು. ಆ ಮಾತು ಈ ಮಾತು ಆದಿ ಮನೆಗೆ ಬಂದಾಗ ಆಕೆಗೆ ತುಂಬ ಬೇಸರವಾಗಿತ್ತು, ಮಾರನೇ ದಿನ "ಲಖನೌದಲ್ಲಿ ಮನೆಗೆ ಬೆಂಕಿ! ಸಾಮಾನೆಲ್ಲ ನಷ್ಟವಾಗಿದೆ ಅದಕ್ಕಾಗಿ ಇಬ್ಬರ ಬಂಧನವಾಗಿದೆ, ಕೂಡಲೇ ಹೊರಟು ಬರಬೇಕು" ಎಂದು ತಾರು ಬಂತು.

ತಾಯಿಗೆ ಮಾತ್ರ ತುಂಬ ದುಃಖವಾಯಿತು. "ಕೊನೆಗೂ ಉದ್ವೇಗತಿಯಾಯಿತು. ಮೊದಲಿನಿಂದಲೂ ನನಗಿದೇ ಅಂಜಿಕೆ ಇತ್ತು. ನಮ್ಮ ಸಮಾಜ ನಿಜವಾಗಿಯೂ, ಅಂಧ ವಿಶ್ವಾಸ ಹಾಗೂ ಹೇಡಿಗಳಿಂದ ತುಂಬಿಹೋಗಿದೆ. ಉಳಿದ ಜನತೆಯೊಡನೆ ಸಂಬಂಧ ಬೆಳೆಸುವದರಿಂದ ನಮ್ಮ ಬಳಗ ಇನ್ನಷ್ಟು ಬಲವಾದೀತೆಂದೂ ತಿಳಿಯ ಬಾರದೇ? ಆಗಲಿ, ನೀನು ಕಲೆಯೊಡನೆಯೇ ಲಗ್ನವಾಗು, ಅವರ ಇಚ್ಛೆಯೇ ಪೂರ್ಣವಾಗಲಿ."

ಆತನಿಗೆ ಎಲ್ಲ ಕಡೆಯಿಂದಲೂ ದುಃಖ ಒತ್ತರಿಸಿತು. "ಇಲ್ಲವಮ್ಮಾ ಹಾಗೆಂದೂ ಆಗದು. ನಾನು ಲಖನೌಗೆ ಹೋಗಿ ಈಗಲೇ ಬಾಲೆಯೊಡನೆ ಲಗ್ನವಾಗುವೆ."

"ಬಾಲೆ, ಇಲ್ಲಿಯೇ ಬಂದಿದ್ದಾಳೆ."

"ಆ, ಎಲ್ಲಿ?"

"ಉಪೇಂದ್ರನ ಮನೆಯಲ್ಲಿ."

"ಹಾಗಾದರೆ ಇಂದೇ ಅವಳೊಡನೆ ಲಗ್ನವಾಗುವೆ."

"ಅಷ್ಟೊತ್ತಿಗೆ ಒಬ್ಬನು ಬಂದು "ಒಡೆಯರೇ, ನೀವು ಹೀಗೆಂದೂ ಮಾಡಲಾರಿರಿ. ಆಕೆ ಹಿಂದುವಲ್ಲ" ಎಂದನು.

"ನೀನಾರೊ? ನನ್ನನ್ನು ತಡೆಯುವವ ಎಂದನು ? "

" ನಾನೊಬ್ಬ ಹಿಂದೂ ಧರ್ಮದ ಪ್ರತಿನಿಧಿ. "

"ನಿನ್ನಂತವನೆಂದೂ ಹಿಂದೂ ಧರ್ಮದ ಪ್ರತಿನಿಧಿಯಾಗಲಾರ ಹಿಂದೂ ಧರ್ಮದವರೆಂದೆನಿಸಿಕೊಳ್ಳುವ ಕೆಲ ಹೇಡಿಗಳ ಬಳಗದ ಪ್ರತಿನಿಧಿ ನೀನು. ಹಿಂದೂ ಧರ್ಮದಲ್ಲಿಯ, ಸೀಖ, ಆರ್ಯಸಮಾಜ, ಇತ್ಯಾದಿ ಪಂಗಡಗಳವರು ಬೇಧವನ್ನು ಗಣಿಸುವದಿಲ್ಲ. "

" ಇವರೆಲ್ಲರೂ ಹಿಂದುಗಳೇ. ಈ ವಿಭಾಗದಲ್ಲಿ ಯಾರನ್ನಾದರೂ ಲಗ್ನವಾಗಿರಿ. ಆದರೆ ವಿಧರ್ಮಿಯೊಡನೆ ಲಗ್ನವಾಗಬೇಡಿರಿ. ಇಲ್ಲವಾದರೆ ನಿಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ " ಎಂದವನೇ ಹೊರಟು ಬಿಟ್ಟ

೨೩

ಲಖನೌದಲ್ಲಿಯ ಮನೆ ಸುಟ್ಟುಹೋದ ಸುದ್ದಿ ಕೇಳಿ ಅಶೋಕಕುಮಾರನಿಗೆ ಏನೇನೋ ಅನಿಸಿತು ಒಮ್ಮೆ ಆತನೂ ಹಳ್ಳಿಯ ಸುಧಾರಣೆ ಮಾಡಬೇಕೆಂದು ಬಯಸಿದ್ದ. ಸಾಮ್ಯವಾದಿ ಜಮೀನುದಾರನಾಗಿ ಕಾಲಕಳೆಯಬೇಕೆಂದು ಬಯಸಿದ್ದ. ಅದರಂತೆಯೇ ಒಮ್ಮೆ ಪ್ರಕೃತಿಯ ಮಧ್ಯದಲ್ಲಿ ಶಾಂತವಾದ ಹಿನ್ನೆಲೆಯಲ್ಲಿ ಸ್ಥಳವನ್ನು ಕೊಂಡು ಉದ್ದೇಶ ಪೂರ್ತಿಗಾಗಿ ಯತ್ನಿಸಿದ್ದ. ಆದರೆ ಹಳ್ಳಿಯಲ್ಲಿ ಹೋಗಿ ನಿಂತೊಡನೆ ಅಲ್ಲಿಯ ಕೆಲಸ ತಾನು ಯೋಚಿಸಿದಷ್ಟು ಸುಲಭವಾಗಿಲ್ಲವೆಂದು ಅರಿತುಕೊಂಡ ಹಳ್ಳಿಯ ಜನದಲ್ಲಿ ಅವಿಶ್ವಾಸ, ಅಂಧವಿಶ್ವಾಸ ತುಂಬಿಕೊಂಡಿತ್ತು. ಕಲಿತವರೆನ್ನುವವರಲ್ಲಿಯೂ ಅದನ್ನು ಕಳೆಯಲು ಯತ್ನಿಸುವ ಸಾಹಸವಿದ್ದಿಲ್ಲ. ಹೀಗೆ ಯಾರಾದರೂ ಯತ್ನಿಸಿದರೆ, ಅವರಿಗೆ ನೆರವಾಗುವದೊತ್ತಟ್ಟಿಗುಳಿಯಲಿ, ತೊಂದರೆಯನ್ನೇ ತಂದೊಡ್ಡುತ್ತಿದ್ದರು. ಹೀಗೆ ನಿರಾಶನಾಗಿ ಅಶೋಕಕುಮಾರ ಹಿಂತಿರುಗಿದ್ದ.

ಆದರೆ ಹಳ್ಳಿಯಲ್ಲಿಯ ಕೆಲವು ಸ್ವಾರ್ಥಿಗಳು ಮಾತ್ರ ಅವನ ಅಪಪ್ರಚಾರವನ್ನು ನಡಿಯಿಸಿಯೇ ಇದ್ದರು ಮಗಳಿಗೆ ಕಲಿಸತೊಡಗಿದರಿಂದಂತೂ ಅವರ ಅಪಪ್ರಚಾರಕ್ಕೆ ಪುಟಕೊಟ್ಟಂತಾಗಿತ್ತು. ಆದರೂ ಅಶೋಕಕುಮಾರ ತನ್ನ ದಾರಿಯಿಂದ ವಿಚಲಿತನಾಗಿರಲಿಲ್ಲ. ಡಾಕ್ಟರರ ಮನೆಗೆ ಬೆಂಕಿಬಿದ್ದ ಸುದ್ದಿಕೇಳಿ ಹೆಂಡತಿಯನ್ನು ಕರೆದು "ಏನೆ? ವ್ರಜೇಶನ ಮನೆಗೆ ಬೆಂಕಿ ಹತ್ತಿದ ಸುದ್ದಿ ಕೇಳಿರುವೆಯಾ?"

"ಹೌದು. ಉಮೆ ಹೇಳಿದಳು"

"ಯಾರೋ ಸಮಗಾಗದವರೇ ಈ ಕೆಲಸ ಮಾಡಬೇಕು"

"ಹೇಗೆ ಹೇಳುವಿರಿ ಇದನ್ನು?"

"ವ್ರಜೇಶನೊಡನೆ ಕಲೆಯ ಲಗ್ನಮಾಡಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲೆಂಬ ಪತ್ರ ಬಂದ ಸುದ್ದಿ ನಿನಗೆ ಹೇಳಿದ್ದೆನಷ್ಟೇ! ಇವರೆ ಯಾರೋ ಮಾಡಿರಬೇಕು."

"ನನ್ನ ವಿನಾಶದಿಂದ ಹಿಂದೂ ಧರ್ಮಕ್ಕೇನೂ ಹಾನಿಯಿಲ್ಲ. ಅವರ ನಿರ್ಜೀವತೆಯನ್ನು ದೂರಮಾಡಿ ಚೈತನ್ಯ ತುಂಬುತ್ತೇವಲ್ಲವೆ?"

"ಇದು ನಿನ್ನ ತಿಳವಳಿಕೆಯಾಯಿತು ಎಲ್ಲರೂ ಹಾಗೆಯೇ ಭಾವಿಸುವರೇನು? ಏನೇ ಇರಲಿ ಕಲೆಯು ಇನ್ನೂ ಎರಡು ಮೂರು ವರ್ಷ ಕಲಿಯುತ್ತ ಕೂಡ್ರುವುದಕ್ಕಿಂತ ಜಿತೇಂದ್ರನೊಡನೆ ಲಗ್ನವಾದರೆ ವಾಸಿ"

"ಹೌದು. ಉಮೆಯೂ ಇದೇ ರೀತಿ ಅಭಿಪ್ರಾಯಪಡುತ್ತಾಳೆ."

ಹಾಗಾದರೆ ಒಳಿತಾಯಿತು ನೀನು ಉಮೆಗೆ ಹೇಳು ಅಂದರೆ ಆಕೆ ಕಲೆಯನ್ನು ಒಪ್ಪಿಸಬಹುದು"

"ಆದರೆ ಜಿತೇಂದ್ರ B. A, M. A ಅಲ್ಲವಲ್ಲ?"

"ಆಗದಿದ್ದರೇನು? ಗುರುಕುಲದ ಶಿಕ್ಷಣ ಪಡೆದವ ಆತ ಅಲ್ಲದೆ ಜೀವನದಲ್ಲಿ, ವ್ಯವಹಾರದಲ್ಲಿ ನುರಿತವ. ಸುಖ ದುಃಖಗಳನ್ನು ಸಹಿಸಿದಾತ. ಆ ದೃಷ್ಟಿಯಿಂದ ನೋಡಿದರೆ ವ್ರಜೇಶನೂ B A, M. A, ಅಲ್ಲ."

"ಆದರೆ ಜಿತೇಂದ್ರ ಶ್ರೀಮಂತನಲ್ಲ"

"ನಾನು ಅವರಿಬ್ಬರನ್ನೂ ಪರಿಶೀಲಿಸಿದ್ದೇನೆ ಈ ಹೊತ್ತು ನೌಕರಿ ಬಿಟ್ಟನೆಂದರೆ ವ್ರಜೇಶನಿಂದ ಜೀವನಸಾಗಿಸುವುದೇ ಕಠಿಣವಾಯಿತು. ಆದರೆ ಜಿತೇಂದ್ರನು ಯಾವಾಗಲೂ ಹಿಂಜರಿಯತಕ್ಕವನಲ್ಲ."

ಅಷ್ಟೊತ್ತಿಗೆ ಬಾಲೆ, ಮತ್ತು ಕಿರಣಗುಪ್ತರು ಅಲ್ಲಿಗೆ ಬಂದರು. ಉಮೆಯೂ ಜೊತೆಗಿದ್ದಳು. "ಬಾಲೆಯೊಡನೆ ನಾಡದು ವ್ರಜೇಶನು ಲಗ್ನ ಮಾಡಿಕೊಳ್ಳತಕ್ಕವನಿದ್ದಾನೆ" ಎಂದಳು ಉಮೆ.

"ತುಂಬ ಸಂತೋಷ. ದಂಪತಿಗಳು ಚೆನ್ನಾಗಿ ಬಾಳಲೆಂದು ಹರಿಸುತ್ತೇವೆ."

"ಆಗಲಿ ಅದರ ಮಾರನೇ ದಿನವೇ ಜಿತೇಂದ್ರನ ವಿವಾಹವೂ ಆಗ ಬೇಕೆಂದು ಈಕೆಯ ಬಯಕೆ."

"ಮಾರನೇ ದಿನ ಆಗಲಾರದು, ಸಿದ್ಧತೆಗೆ ನಾಲ್ಕಾರು ದಿನವಾದರೂ ಬೇಡವೆ?"

"ಆಗಬಹುದು" ಎಂದು ಉಮೆಯು ಒಳಗೆ ಹೋದಳು ಅಲ್ಲಿ ಬಾಲೆ ಇದ್ದಳು

"ಬಾಲೆಯ ವಿವಾಹದ ನಾಲ್ಕನೆಯ ದಿನಕ್ಕೇ ನಿನ್ನ ಮದುವೆ. ನಾನೀಗ ಬಾಲೆಯನ್ನು ನನ್ನ ಮನೆಗೆ ಕರೆದುಕೊಂಡು ಹೋಗುತ್ತಿದ್ದೇನೆ."

ನಾನೆಲ್ಲ ಕೇಳಿರುವೆ ಆದರೆ ನನ್ನ ಶರ್ತುಗಳ ಪೂರ್ತಿಯಾಗದ ಹೊರತು ನಾನು ವಿವಾಹವಾಗುವಂತಿಲ್ಲ"

"ಹಾಗಾದರೆ ನಾಲ್ಕು ದಿನಕ್ಕೋ, ನಾಲ್ಕುವರ್ಷಕ್ಕೋ ನನಗೂಟ."

"ನಾಲ್ಕೂ ಆಗಬಹುದು; ನಾಲ್ವತ್ತೂ ಆಗಬಹುದು ಆಜನ್ಮ ಬ್ರಹ್ಮಚಾರಿಣಿಯಾಗಿ ನವ ಶಿಕ್ಷಕಿಯರನ್ನೆಷ್ಟೋ ನೋಡಿರುವೆ."

"ನನಗೂ ನಿನ್ನ ಗುಟ್ಟು ಕೊಡಬೇಕೆಂದು ಮಾಡಿರುವೆಯೇನು?"

"ಗುಟ್ಟು ರಟ್ಟಾಗದಿರುವಿಕೆಯೇ ಜೀವನಕ್ಕೆ ಸ್ವಾರಸ್ಯತಂದಿದೆ."

"ಅಂತೂ ನಿನಗೇನು? ಹೊಸ ಜೀವನದಾರಂಭ"

**ಕೊನೆ**

ಕಿರಣಗುಪ್ತ, ಕರುಣಾರ ವಿವಾಹವಾಗಿದೆ. ಕಲಿ ಜಿತೇಂದ್ರರೂ, ಬಾಲೆ, ವ್ರಜೇಶರೂ ದಂಪತಿಗಳಾಗಿ ಸುಖದಿಂದ ಕಾಲಹರಣಮಾಡುತ್ತಿದ್ದಾರೆ. ಉಮೆಯೂ ತನ್ನ ಗಂಡನ ಜೊತೆಗೆ ಲಖನೌದಲ್ಲಿಯೇ ಇರುತ್ತಾಳೆ. ಈಗ ಅವರ ಪತ್ರಿಕೆಯೂ ಅಲ್ಲಿಂದಲೇ ಹೊರಡುತ್ತದೆ

ಹಿಂದೂ ಧರ್ಮದ ಅನೇಕ ಜಾತಿ ಒಂದಾಗಿ ಹಿಂದೂ ಧರ್ಮ ಸಂಘ ಟಿತವಾಗಬೇಕೆಂದು ಅಶೋಕಕುಮಾರ ಬಯಸುತ್ತಿದ್ದ. ವ್ರಜೇಶನ ತಾಯಿಯು ಅದೇ ಅಭಿಪ್ರಾಯದವಳಾಗಿದ್ದಳು ಆದರೆ ಉಮೆಯು ಹಿಂದೂ ಧರ್ಮಕ್ಕೆ ಹೊಸ ಅರ್ಥ ಹಚ್ಚಿದಳು. ಜಾತಿಯ ವ್ಯಾಖ್ಯೆಯ ಮೂಲವನ್ನು ಅರಿತು ಜನ ಹಿತವಾಗುವಂತೆ ಯತ್ನಿಸಿದಳು.

---

# ಸಮಾಜ ಪುಸ್ತಕಾಲಯ, ಧಾರವಾಡ

## —:ನಮ್ಮಲ್ಲಿ ದೊರೆಯುವ ಅತ್ಯುತ್ತಮ ಪುಸ್ತಕಗಳು:—

### ಕಾದಂಬರಿಗಳು

| | | |
|---|---|---|
| ಎರಡು ಸೆಳೆತ | | ೧-೧೨-೦ |
| ಬೆಳವಲದ ಭಾಗ್ಯಲಕ್ಷ್ಮಿ | | ೨-೮-೦ |
| ಸಮ್ರಾಟ್‌ಹರ್ಷವರ್ಧನ | | ೨-೦-೦ |
| ರಾಜಯೋಗಿ | | ೨-೦-೦ |
| ಸುದರ್ಶನ | | ೧-೮ ೦ |
| ಸಾವಿನ ಉಡಿಯಲ್ಲಿ | | ೩-೦-೦ |
| ಮೂರಾಬಟ್ಟೆ | | -೧೫-೦ |
| ಅನ್ನಪೂರ್ಣಾಮಂದಿರ | | ೨-೦-೦ |
| ಧರ್ಮಸಂಕಟ | | ೨-೦-೦ |
| ಬಿರುಗಾಳಿ | | ೩-೭-೦ |
| ಗಂಡುಹೆಣ್ಣಿನ ಸಮಸ್ಯೆ | | ೩ ೮-೦ |
| ರಮಾನಾಥ | | ೩-೦-೦ |
| ಮನೆಯ ಸುಖಶಾಂತಿ | | ೦-೧೨ ೦ |
| ಮಾಧವಲೀಲೆ | | ೧-೮ ೦ |
| ಕಾಲಯಾನ | | ೧-೧೦-೦ |
| ಡಾಕ್ಟರ್‌ಗಿರೀಶ(ಪತ್ತೆದಾರಿ) | | ೦-೬-೦ |
| ಷೋಡಶಿ | | ೨ ೦-೦ |
| ವಿಜಯಾ | | ೧-೮-೦ |
| ದೇವದಾಸ | | ೧-೮-೦ |
| ವೈಕುಂಠನ ಮೃತ್ಯುಪತ್ರ | | ೧-೭-೦ |
| ಶ್ರೀಕಾಂತ (೮ ಭಾಗ) | | ೧೦-೦-೦ |
| ಭೂಮಾತೆ ಮತ್ತು ಮಂದಿರ | | ೧-೮-೦ |
| ರಾಜಲಕ್ಷ್ಮಿ(ಶರತ್-ನೀಳ್ಗತೆ) | | ೧-೮-೦ |
| ಪ್ರೇಮಪಥ | ,, | ೦-೫-೦ |
| ಮಹಾಸತಿ | ,, | ೦-೫-೦ |
| ಗುರುಚರಣ | ,, | ೦-೪-೦ |
| ಹೇಮಾಂಗಿನಿ | ,, | ೦-೪-೮ |
| ಮಂಗಲಸೂತ್ರ | ,, | ೦-೩-೦ |
| ಮಹೇಶ | ,, | ೦-೩-೦ |
| ಅಭಾಗಿನಿಯಸ್ವರ್ಗಾರೋಹಣ | | ೦-೨-೦ |

### ಕತೆ-ನೀಳ್ಗತೆಗಳು

| | |
|---|---|
| ಗೃಹದಾಹ (ಪ್ರೇಮಚಂದ) | ೧-೮-೦ |
| ಘಾಟೀಮುದುಕ(ದೇವುಡು) | ೧-೮-೦ |
| ಚಕಮಕಿ ಬೇಂದ್ರೆ | ೨-೦-೦ |
| ನಮ್ಮ ಬದುಕು | ೦-೧೪-೦ |
| ಬಡತನದಬಾಳು | ೧-೪-೦ |
| ಉರ್ದೂಕಥಾವಳಿ | ೦-೭-೦ |
| ಪ್ರತಿಬಿಂಬ | ೦ ೬-೦ |
| ಹೊಂಬಿಸಿಲು | ೧-೮-೦ |
| ಹೂಬಿಸಿಲು | ೧-೦-೦ |
| ರಾಮೂನ ಕತೆ | ೧-೫-೦ |
| ತಾಪತ್ರಯ (ಜೋಕೆ) | ೦-೬ ೦ |
| ಕನ್ನಡಿ (ಅನಿರುದ್ಧ) | ೦-೬-೦ |
| ಜೇನು (ರಮಾನಂದ) | ೦-೬-೦ |
| ಬಹಿಷ್ಕಾರ (ನೆರಂಗ) | ೦-೬-೦ |
| ತೂರಯಾ ಪ್ರೇಮಚಂದ | ೦-೫-೦ |
| ದುರ್ಗಾಮಂದಿರ | ೦-೩-೦ |
| ಬಂಗಾರದಹೊಗೆ | ೦-೨-೦ |
| ಸೌಭಾಗ್ಯವತಿ | ೦-೨-೦ |
| ಗಾಂಧೀಹುಚ್ಚ | ೦-೨-೦ |
| ವಿಧವಾಕುಮಾರಿ | ೦-೨-೦ |
| ನಾರೀರತ್ನ | ೦-೨-೦ |
| ನೌಕರಿ | ೦-೧-೬ |
| ರಾವಬಹಾದ್ದೂರ | ೦-೧-೬ |
| ಗಳಗನಾಥ(ಚರಿತ್ರೆ) | ೧-೮-೦ |
| ಮುಕ್ಕಣ್ಣ ಯಾತ್ರೆ (ರಂಗಮಂಗ) | ೧-೨-೦ |
| ಶ್ರೀರಂಗ-ಜೀವನಸಾಹಸ | ೧-೮-೦ |
| ಮುಸಲೋನಿ ಚರಿತ್ರೆ | ೦-೩-೦ |
| ಮಾತ್ರೆಗಳು (ಬಿ ಚಿ.) (ಸಾಮುದ್ರಿಕಶಾಸ್ತ್ರ) | ೦-೧೨-೦ |
| ಕೈಗನ್ನಡಿ (ಸಚಿತ್ರ) | ೧-೮-೦ |